ಮನ್ಸ್‌ಲಿ ಏನ್ ಕಂಡತೋ ಏನೆಲ್ಲಾ ತುಮುಲ ನಡೀತಿತ್ತೊ ಅವ್ಕನೇ ಗೊತ್ತ್. ಈ ಪಿಳ್ಳಿ ಸಾಮಾನ್ಯ ಅಲ್ಲ. ಅವನ ಕೈಲಿದ್ದ ಬೆಡಿನೂ ಸಾಮಾನ್ಯ ಅಲ್ಲ. ಅದರ ಹಿಡಿವ ಹಕ್ಕ್‌ನ ಹೊತ್ತೇ ಅವ ಇಂದ್ ಇಲ್ಲಿ ಬಂದವ. ಅವನ ಬೆರಳ್‌ಲಿ ಮೀಟಿದ ಕಳ್ಳ ಬಿದ್ದ ಪೆಟ್ಟಲಿ ಹೊಡ್ಡ ಗುಂಡ್‌ಗ ತಪ್ಪುದುಲೆ. ಅದ್ ಅವ್ಕೂ ಗೊತ್ತಿತ್ತ್. ದೂರದ ಹಾಸನ, ಸಕಲೇಶಪುರ, ಬೇರೆಡೆ ಎಲ್ಲಾ ಅವ ಹೊಕ್ಕಿದ ಕಾಡ್‌ನ ಬಗ್ಗೆ ಅವು ಕೇಳಿದ್ದೊ. ಅವರ ಮನ್ಸ್‌ಲಿ ಆಗ ಅವು ನೆನ್ಸಿಕಂಡಿದ್ದೊ. ಹುಲಿನ ಹೊಟ್ಟೆಲಿ ಹುಟ್ಟುದು ಹುಲಿನೇಂತ. ತಕ್ಷಣಲೇ ಅಪ್ಪಯ್ಯಜ್ಜ ಒಂದ್ ತೀರ್ಮಾನ ತೆಕಂಡೋ. "ಇಂದ ಅಣ್ಣ ನಾ – ಇಂದ್ ನಿನ್ನೊಟ್ಟಿಗೆ ಬಿಲ್ಲ್‌ಲಿ ನಿತ್ತನೇಂತ – ಹೇಳಿ ಅವನ ಕೈಲಿದ್ದ ಬೆಡಿನ ತೆಕಂಡೊ.. ಅದ್ ಅಂದ್‌ನ ದಿನದ ಅದ್ಭುತ ಆದೇಂತ ಯಾರಿಗೂ ಗೊತ್ತಿತ್ತೆ. ಹೌದು ಅಂದ್‌ನ ದಿನ ಆ ಮಹಾನ್ ಬೇಟೆಗಾರನ ಕಡೆನ ಬೇಟೆ ಆಗಿರ್ದುಂತ ಯಾರೂ ಊಹಿಸಿಕೂ ಸಾಧ್ಯ ಇತ್ತೆ. ಅಪ್ಪಯ್ಯಜ್ಜನ ಕೈಲಿ ಈಗ ಅವರ್ದ್ ಅಲ್ಲದಿದ್ದರೂ ಅವರ್ದೇ ಆದ ಬೆಡಿ ಇತ್ತ್. ಅದೇ.. ಅದ್, ಅದೇ ಜೀಕೋ ಜರ್ಮನ್ ಬೆಡಿನ ಹಿಡ್ದ್ ಅದರ ಪೂಸಿಕನ ಅವರ ಕಣ್ಣ್‌ಲಿ ನೀರಿತ್ತ್. ಮೆಲ್ಲಂಗೆ ಮೇಲೆಂದ ಕೆಳಗೆ ಅದರ ಸವರಿದೊ. ಬೆಡಿನ ಮುರ್ದ್ ಒಳಗೆ ನೋಡ್ದೊ. ಅವರ ಇಳಿ ಪ್ರಾಯದ ನೀರ್ ತುಂಬಿದ ಕಣ್ಣಿಗೆ ಎಂತದ್ ಕಂಡತೋ ದೇವ್ರಿಗೇ ಗೊತ್ತ್. ಆದರೂ ಅವು ಸಾಮಾನ್ಯ ಅಲ್ಲ. ಜೀವನದ ಮುಪ್ಪುಲಿದ್ದರೂ ಯೌವನದ ಬೆಡಿ ಇತ್ತ್. ಅಂದ್ ಅವು ಅನುಭವಿಸಿದ ಸಂತಸ ಎಂತದೋ. ಇದೇ ಬೆಡಿ... ಇದೇ ಬೆಡಿ. ಅವರ ಎದ್ರ್‌ಗೆ ದರೆಯಾಳಿದ ದೊರೆಗಳನೂ ದಿಗ್ಮೂಡ ಮಾಡಿತ್ತ್. ಹಾರುವ ಹಕ್ಕಿಗ, ಓಡುವ ಕಾಟಿಗ, ಭೀಕರ ಹುಲಿಗ ಅವರ ಕೈಲಿದ್ದ ಈ ಇದೇ ಬೆಡಿ ಎದ್ರಿಗೆ ಬಗ್ಗಿ ತಗ್ಗಿ ಬಿದ್ದಿದ್ದೊ. ಕಣ್ಣೆದುರು ಒಮ್ಮೆಗೇ ಸಾವಿರ ಸಾವಿರ ನೆನಪುಗ ಮೂಡ್ತಿದ್ದೊ. ಇದರ ಹಿಡ್ದೇ ದೂರದ ಪಾಲಿಬೆಟ್ಟ, ಆನೆಕಾಡ್, ಕೇರಳದ ಕಾಸರಗೋಡ್, ಇಲ್ಲಿ ಬೇಂಗಮಲೆ, ಬಂಟಮಲೆ, ಪೂಮಲೆ, ಸುತ್ತ ಸುತ್ತಾಡಿದ್ದೊ. ಒಂದೊಂದ್ ಕಡೆಲಿನೂ ಒಂದೊಂದ್ ಅನುಭವ, ಇವರ ಹಿರಿಮೆಗೆ ಮೆಚ್ಚಿ ಅಂದ್‌ನ ಮೈಸೂರು ರಾಜನ ದಿವಾನನೇ ಮುಂದೆ ಬಂದ್ ನಿತ್ತ್ ಬೆಡಿನೊಂದರ ಬಹುಮಾನ ಕೊಟ್ಟಿದ್ದೊ. ಅಪ್ಪಯ್ಯಜ್ಜನ ಪಾಲ್ ಎಷ್ಟಿತ್ತೊ, ಬೆಡಿನ ಪಾಲುನೂ ಅಷ್ಟಿತ್ತ್. ಅಜ್ಜನ ಕಣ್ಣ್‌ಲಿ ನೀರಿತ್ತ್. ಕುಞ್ಞಣ್ಣ ಕರೇಲಿ ನಿತ್ತಿತ್ತ್. ಅವಂಗೆ ಗೊತ್ತಿತ್ತ್. ಅವ್ಕೂ ಆ ಬೆಡಿಗೂ ಎಂಥಾ ಸಂಬಂಧಾಂತ. ಅವನ ಕಣ್ಣೂ ಮಂಜಾಗಿತ್ತ್.

ಅಪ್ಪಯ್ಯಜ್ಜನೂ ಬೇಟೆಗೆ ಬಂದವೇಂತ ಆಕನ ಎಲ್ಲ ಹೃದಂಗಳಿಗೂ ಒಮ್ಮೆನೇ ಉಮೇದ್ ಬಂದಿತ್ತ್. ಅಪ್ಪಯ್ಯಜ್ಜನಂತ ಅಪ್ಪಯ್ಯಜ್ಜನೊಟ್ಟಿಗೆ ಬೇಟೆಲಿ

ಸೇರ್ದುಂತ ಹೇಳ್ರೆ ಅದ್ ಸಾಮಾನ್ಯ ಅಲ್ಲ. ಇಂದ್‌ಗೆ ಅದ್ ಮಾಮೂಲಿರ್‍ದು. ಮುಂದೆಗೆ ಅದುನೂ ಒಂದ್ ಕತೇನೇ. ಎಲ್ಲರ ಮೋರೆಲಿ ಹರ್ಷ ಇತ್ತ್. ಒಳಗೆ ಕುದ್ದ್‌ಕಂಡ್ ಇದ್ದ ಚೋಯಂಬು ಅಜ್ಜನ ಕಣ್ಣ್‌ಲಿ ನೀರಿತ್ತ್. ಅವುಕೆ ಗೊತ್ತಿತ್ತ್. ಇಂದ್ ಎಲ್ಲರಾಂಗೆ ನಾ ಇದ್ದಿದ್ದರೆ ಅಪ್ಪಯ್ಯಣ್ಣನ ಹಕ್ಕಲೆ ನಾನೇ ಇರಕಾಗಿತ್ತ್‌ಂತ. ಆದರೆ ದೇವರ ನಿರ್ಣಯ ಹಾಂಗಿತ್ಲೆ. ಸುಮ್ಮನೆ ಕಣ್ಣ್ ಮುಚ್ಚಿ ಹಿಂದೆನ ದಿನಗಳ ನೆನ್ಸಿಕಂಡೊ. ಅಂದ್‌ನ ದಿನನೂ ಸಾಮಾನ್ಯ ಆಗಿತ್ಲೆ. ಅಪ್ಪಯ್ಯಣ್ಣನ ಮೇಲ್ಮೆಗೆ ಅಂದ್ ಅಂದೊಂದು ಗರಿ ಮೂಡುವಾಂಗಿತ್ತ್. ಇತ್ತ ನಿನ್ನೊಟ್ಟಿಗೆ ಬಿಲ್ಲ್‌ಗೆ ನಿತ್ತನೆಂತ ಅಜ್ಜ ಹೇಳಿಕಾಕನ ಆದುಲೆಂತೆ ಹೇಳದ ಕುಞ್ಞಣ್ಣಂಗೆ ಹೇಂಗಪ್ಪ ಅಜ್ಜನ ಹಕ್ಕಲೆ ನಿಲ್ಲುದೂಂತ ಆಗಿತ್ತ್. ಅಂದರೂ ನೋಡ್ವೆ ಬುಡೊಮೋಂತ ಕಂಡತ್. ಎಲ್ಲವೂ ಮನೆಂದ ಹೊರ್‍ಟೊ. ಅಪ್ಪಯ್ಯಜ್ಜಂಗೆ ಕಾಡು ಹತ್ತಿ ಹೋಗಿ ನಿಲ್ಲುದು ಸುಲಬ ಇತ್ಲೆ. ಕೆಳಗೆ ಗುಂಡ್ಯದ ಕರೆಂದ ಕಾಡು ಹೊಡಿದೂಂತ ಆಕನ ಹಂದಿ ಅತ್ತಂದ ದಾಟಿರೆ ಅದ್ ಚೋಡಿ ದಾಟಿ ಗದ್ದೆ ನಡುಲೇ ಓಡಿ ಅಮ್ಮೋಜಿ ಬನದ ಅತ್ತ ದಾಟುದು ಸಾಮಾನ್ಯ. ನಾನು ನೀನು ಆ ಬೈಲ್‌ಲೇ ಕಟ್ಟಪುಣಿಲಿ ನಿಲ್ಲೊಮೋಂತ ಅಜ್ಜ ಹೇಳ್ದೊ. ಹಾಂಗೆ ಅವಿಬ್ಬರೂ ಚೋಡಿ ದಾಟಿ ಸ್ವಲ್ಪ ಮುಂದೆ ಹೋಗಿ ನಿತ್ತೋ. ದೂರಂದ ಕೂಕ್‌ಳ್ ಕೇಳ್ತ್. ಎಲ್ಲವೂ ಬಿಲ್ಲ್‌ಗೆ ನಿತ್ತಾಗಿತ್ತ್. ಕಾಡ್ ಹೊಡ್ಯವು ಪ್ರಭುಗಳ ತೋಟದ ಮೇಲೆಂದ ಕಾಡ್ ಹೊಡ್ಯಕೆ ಸುರುಮಾಡ್ದೊ ಯಾಕೆ ಆ ಕ್ಷಣಲಿ ಅಂತ ಪ್ರಶ್ನೆ ಕುಞ್ಞಣ್ಣಂದೆ ಬಾತೋ. ನೀವು ಬೆಡಿನ ಹಿಡಿನಿ ಅಜ್ಜಂತ ಹೇಳಿ ಕುಞ್ಞಣ್ಣ ಬೆಡಿನ ಅಜ್ಜನ ಕೈಗೆ ಕೊಟ್ಟತ್. ನೀನೇ ಬೆಡಿ ಹಿಡಿಂತ ಹೇಳಿಕಂಡೇ ಬೆಡಿನ ಕಡೆಗೆ ಕೈ ಚಾಚಿದೊ. ಅಂವ ಬೆಡಿನ ಅಜ್ಜಂಗೆ ಕೊಟ್ಟತ್ ಎಂತ ತೋಟೆ ತುಂಬಿಸ್ಯೊಳ ಅಜ್ಜ ಕೇಳ್ದೊ. ಬಲ್‌ದರ್‍ಲಿ ಎಲ್‌ಜಿ, ಎರಡರ್ಲಿ ಒಂದ್ ಒಂಟಿ ಗುಂಡ್‌ನ ಎಲಿ ಕಂಪನಿ ತೋಟೆ ಉಟ್ಟುಂತ ಹೇಳಿಕನ, ಓ ಒಂಟಿಗುಂಡ್ ಉಟ್ಟೊ... ಈಗ ಯಾರೂ ಆದರ್ಲಿ ಹೊಡಿದುಲೆಂತ ಹೇಳ್ದೊ. ಯಾಕೆಂತೇಳ್ರೆ ಒಂಟಿ ಗುಂಡ್‌ಲಿ ತಾಂಗ್‌ಸಿಕೆ ಅಷ್ಟೇ ಗುರಿಬೇಕು. ಒಂದ್ ರೀತಿಲಿ ಅಜ್ಜಂಗೆ ಪಿಳ್ಳಿನ ಮೇಲೆ ಕುಶಿಯಾಗಿತ್ತ್. ಗುರಿ ಸಾಧಿಸುವ ಧೈರ್ಯ ಇದ್ದವಾಂತ ಗೊತ್ತಾಗಿತ್ತ್.

ದೂರಂದ ಕೇಳಿಕಂಡ ಬರ್ತಿದ್ದ ಬೊಬ್ಬೆ ಹಕ್ಕಲೆ ಹಕ್ಕಲೆ ಆತ್ ಒಮ್ಮೆನೇ ಎಲ್ಲವರ ಬೊಬ್ಬೆ ದೊಡ್ಡದಾಗಿ ಕೇಳ್ತ್. " ಪಂಜಿ ಲಕ್ಕ್‌ಂಡ್, ಹಂದಿ ಎದ್ದತೋ..." ಬೊಬ್ಬೆ ಕೇಳ್ತಿತ್ತ್. ಚುರ್ಕರ ಕುದ್ದ ಅಜ್ಜ. ಒಮ್ಮೆನೇ ಮೇಲೆದ್ದ್ ನಿತ್ತೊ. ಬೊಬ್ಬೆ ಕೇಳ್ತಾನೇ ಇತ್ತ್. ಅಪ್ಪಯ್ಯಜ್ಜ ನಿತ್ತ ಗದ್ದೆನಾಚೆನ ಪುಣಿ ಕಾಣ್ತಿತ್ತ್. ಆದಂರ್ದ ಆಚೆ ಚೋಡಿ. ಚೋಡಿಗೆ ಹಂದಿ ಇಳ್ದರೆ ಅದ್ ಇತ್ತ ಬಂದೇ ಬರೊಕು.

ಅದರ್ನೇ ಅಜ್ಜ ಪಿಳ್ಳಿ ಇಬ್ಬರೂ ಕಾಯ್ತಿದ್ದೊ. ಹಂದಿ ಮುಂದೆ ಬಂದ್‌ಕಂಡ್ ಉಟ್ಟುಂತ ಕರ್ಪ್ ಹೇಳಿಕಂಡೇ ಇದ್ದೊ. ಒಟ್ಟಿಗೆ ಎರ್ಡ್‌ಮೂರ್ ನಾಯಿಗಳ ಬೊಬ್ಬೆ. ನೋಡಿಕಂಡ್ ನೋಡಿಕಂಡ್ ಇದ್ದಾಂಗೆನೇ ಜೀವ ಭಯಲಿ ಓಡಿಕಂಡ್ ಬಂದ ಹಂದಿ ಚೋಡಿನ ದಾಟಿ ಒಂದೇ ಸರ್ತಿಗೆ ಚೋಡಿಂದ ಕಟ್ಟಪುಣಿಗೆ ಹಾರಿತ್ತ್. ಅಜ್ಜಂಗೆ ಪಿಳ್ಳಿಗೆ ಈಗ ದೂರಲಿ ಹಂದಿ ಸ್ಪಷ್ಟ ಆಗಿ ಕಂಡತ್. ಹಂದಿನ ದಾರಿ ಇನ್ನ್ ಇತ್ತಳೆ ಅವುಕೆ ಇಬ್ಬರಿಗೂ ಗೊತ್ತಿತ್ತ್. ಇಲ್ಲೇ ಹಾಂಗೆ ಆತ್ಲೆ. ಸೀದಾ ಗದ್ದೆಗೆ ಇಳ್ದ ಹಂದಿ ಗದ್ದೆಲಿ ನಾಲ್ಕ್ ಹೆಜ್ಜೆ ತೆಗ್ದ ಹಂದಿ ಒಮ್ಮೆನೇ ಹಿಂದೆ ತಿರ್‍ಗಿತ್. ಯಾವ ಮೂಕಳ್ಮೆನೋ... ಅದ್ಕೆ ಈ ದಾರಿ ಸರಿ ಅಲ್ಲಾಂತ ಕಂಡಿರೊಕು. ಈಚೆ ಪುಣಿಂದ ಆಚೆ ಪುಣಿಗೆ ದೂರ ತುಂಬಾ ಇತ್ತ್. ಹಾಂಗಾಗಿ ಅಲ್ಲಿಗೇ ಗುಂಡ್ ಹೊಡೆಯುವ ಮನ್ಸ್ ಮಾಡ್ತಲೆ ಅಜ್ಜ. ಆದರೆ ಒಮ್ಮೆನೇ ಹಂದಿ ಇತ್ತ ಬಾದರ ಬುಟ್ಟ್ ಅತ್ತ ತಿರ್‍ಗಿಕಾನ ಗೊತ್ತಾತ್ ಹಂದಿ ಇನ್ನ್ ಚೋಡಿಗೆ ಇಳ್ಯಕಿಲೆ. ಅದ್ ಸೀದಾ ಕಟ್ಟಪುಣಿಲೇ ಓಡಿ ಗುಂಡ್ಯ ಸ್ಥಾನದ ಕರೆಲಾಗಿ ಗುಡ್ಡೆ ಹತ್ತುದೂಂತ. ಇದೆಲ್ಲಾ ಕ್ಷಣದೊಳಗೆ ಅಪ್ಪಯ್ಯಜ್ಜನ ಮನ್ಸ್‌ಗೆ ಬಂದ್ ಹೋಗಿತ್ತ್. ಕುಞ್ಞಣ್ಣನ ಮನ್ಸ್‌ಲಿ ಛೆ! ನಾ ಆಗಿದ್ದರೆ ಇಷ್ಟರ್ಲೆ ದೂರ ಇದ್ದರೂ ಆದೂಂತ ಎರ್ಡ್ ಗುಂಡ್ ಹೊಡ್ಕಂಡಿದ್ದೇಂತ. ಇಲ್ಲೇ ಅಪ್ಪಯ್ಯಜ್ಜನೂ ಹಾಂಗೆ ನೆನ್ಸಿಕಣೆತಿದ್ದೊನೋ ಏನೋ. ಅವು ಈಗ ಬೆಡಿನ ಭುಜಕ್ಕೆ ಹಿಡ್ದ್ ಗುರಿ ಒಂಬ್‌ಸ್ತಿದ್ದೊ. ಠಳ್ ಗುಂಡ್‌ನ ಶಬ್ದ ಇಡೀ ಗುಂಡ್ಯ ಬೈಲ್‌ಲಿ ಕೇಳಿ ದಾಟಿ ಕಂತಿತ್. ಎಷ್ಟೋ ದೂರಕ್ಕೆ ಮತ್ತೆ ಅವಕಾಶ ಸಿಕ್ಕುದ್ಲೆಂತಳೋ... ಅಲ್ಲ ತಾಂಗ್‌ಸುವ ಧೈರ್ಯಂದಳೊ... ಅಪ್ಪಯ್ಯಜ್ಜ ಗುಂಡ್ ಹೊಡ್ದಿದ್ದೊ. ಅವರ ಗುಂಡ್ ಸದ್ದ್ ಕಂತಿಕೆ ಮುಂದೆ ಆಚೆಕರೆ ಪುಣಿಲಿ ಓಡಿಕಂಡ ಇದ್ದ ಹಂದಿ ಪೆಟ್ಟ್ ತಾಂಗಿ ಬಿದ್ದದ್ದೋ ಅಲ್ಲ ಅತ್ತ ಚೋಡಿಗೆ ಹಾರ್‍ದೊ ಒಂದು ಗೊತ್ತಾತ್ಲೆ. ಅಜ್ಜನ ಕೈಯಿಂದ ಬೆಡಿನ ಎಳ್ಕಂಡಾಂಗೇ ತೆಕ್ಕಂಡ ಕುಞ್ಞಣ್ಣ ಬೆಡಿನ ಮುರ್ದ್ ಅಜ್ಜ ಹೊಡ್ದ ತೋಟೆ ತೆಗ್ದ್ ಬೇರೆ ತುಂಬ್ಸಿಕಂಡ್ ಓಡಿಕಂಡೇ ಆಚೆಕರೆಗೆ ಹೋತ್.

ಪುಣಿಂದ ಆಚೆ ಚೋಡಿ ಸುಮಾರ್ ಒಂದಾಳ್ ಕೆಳಗೆ ಇತ್ತ್. ಚೋಡಿನ ಕರೆಲಿ ನಾಲ್ಕ್ ಕಾಲೂ ಮೇಲೆ ಆಕಂಡ್ ಆ ಹಂದಿ ಬಿದ್ದಿತ್ತ್. ಅದರ ಕಂಡ ಕುಞ್ಞಣ್ಣಂಗೆ ಮೈಯೆಲ್ಲಾ ರೋಮ ಕುತ್ತ ಆಗಿತ್ತ್. ಅಪ್ಪಯಜ್ಜನ ಗುಂಡ್ ತಪ್ಪುದುಲೆ. ಅದ್ ಸಾಬೀತಾಗಿತ್ತ್. ಹಂದಿನ ಹಕ್ಕಲೆ ಬಾಕೆ ಧೈರ್ಯ ಇಲ್ಲದೆ ನಾಯಿಗ ದೂರಂದಳೇ ಬೊಗ್ಳಿಕಂಡ್ ಇದ್ದೊ. ಗುಂಡ್ ಶಬ್ದ ಕೇಳ್ರೆನೂ ಯಾರೂ ಬಿಲ್ಲ್ ತೆಗಿದುಲೆಂತ ಕುಞ್ಞಣ್ಣಂಗೆ ಗೊತ್ತಿತ್ತ್. ಅವ ಜೋರ್ ಕೂಕಳ್ ಹಾಕಿತ್. ಅಷ್ಟೊತ್ತಿಗೆ ಕಾಡ್ ಹೊಡ್ಯುವು ಎಲ್ಲಾ ಅಲ್ಲಿಗೆ ಬಂದ್ ಸೇರ್‍ದೊ. ಎಲ್ಲರ ಕಣ್ಣ್‌ಲಿನೂ ಹೊಳ್ಪಿತ್ತ್. ಕುಞ್ಞಣ್ಣ ಅವರ ಕಣ್ಣ್‌ಗೆ ಹೀರೋ ಆಗಿ ಕಾಣ್ತಿತ್ತ್. ನಡ್ದದೇನ್‌ಂತ ಅಷ್ಕೆ ಯಾರಿಗೂ

ಗೊತ್ತಿಲ್ಲೆ. ಅಷ್ಟೊತ್ತಿಗೆ ಆಚೆಕರೆ ಪುಣಿಂದ ಅಪ್ಪಯ್ಯಜ್ಜ ನಡ್ದ್ ಬಂದ್ ಇತ್ತ ಸೇರಿದ್ದೊ. ಮೇಲೆಂದಳೇ ಹಂದಿನ ನೋಡ್ದ ಅಪ್ಪಯ್ಯಜ್ಜ ಪಿಳ್ಳಿನ ಕೈಂದ ಬೆಡಿ ತೆಕಂಡೊ. ಅದರ ಒಮ್ಮೆ ಪ್ರೀತಿಲಿ ನೋಡ್ದೊ. ಬೆಡಿನ ಹಿಡ್ಕಂಡ್ ಚುರ್ಕರ ಕುದ್ದ ಅಪ್ಪಯ್ಯಜ್ಜ ಜೋರ್ ಮರ್ಡಿಕೆ ಸುರು ಮಾಡ್ದೊ. ಯಾವ ನೆನ್ಪು ಅವರ ಮರ್ಡಿಸಿತೋ. ಯಾವ ಸಂತೋಷ ಅವರ ಮರ್ಡಿಸಿತೋ. ದೇವ್ರಿಗೇ ಗೊತ್ತ್. ಹಂದಿನ ಕೈಪಾರಿಕೆಲಿ ನುಗ್ಗಿದ ಗುಂಡ್ ಕುತ್ತಿಗೆ ಕರೆಲಾಗಿ ಆಚೆ ದಾಟಿತ್ತ್. ಅದರ ನೋಡ್ದ ಕುಞಣ್ಣಂಗೆ ಅರ್ಥ ಆಗಿತ್ತ. ಅಜ್ಜ ಹೊಡ್ದದ್ ಒಂಟಿ ಗುಂಡ್‌ಲಿಂತ. ಅಂತಾ ದೂರಕ್ಕೆ ಇಂತಾ ಪ್ರಾಯಲಿ ಓಡುವ ಹಂದಿಗೆ ತಾಂಗ್‌ಸೊಕರೆ ಅದ್ ಸಾಮಾನ್ಯ ಅಲ್ಲಂತ. ಹೌದು ಅದ್ ಸಾಮಾನ್ಯ ಅಲ್ಲ. ಅದ್ಕೇ ಅಪ್ಪಯ್ಯಜ್ಜ ಸಾಮಾನ್ಯ ಆಗಿಲ್ಲೆ. ಸುಮಾರ್ ಅರ್ವತ್ತ ಐದ್ ವರ್ಷಗಳ ಹಿಂದೆ ಹೀಂಗೆನೇ ಗದ್ದೆಲಿ ಓಡಿ ಬಂದ್ ಚೋಡಿ ದಾಟಿದ ಕಡೆನ ಕೇಪುನ ಬೆಡಿಲಿ ಹೊಡ್ದ ಅಪ್ಪಿ ಹೈದನ ಸುರೂನ ಗುಂಡ್ ಅದಾಗಿತ್ತ್. ಯಾರಿಗೂ ಗೊತ್ತಿಲ್ಲೆ ಇಂದ್‌ದ್ ಇದ್ ಅವರ ಬೇಟೆ ಜೀವನದ ಕಡೇ ಗುಂಡ್‌ಂತ. ಇಂದುನೂ ಚೋಡಿ ದಾಟಿ ಓಡುವ ಹಂದಿಗೆ ಕೈಪಾರಿಗೆ ಗುರಿ ಮುಟ್ಟಿ ಹೊಡ್ದಿದ್ದೊ. ಎಂತಾ ಪ್ರಾರಂಭ! ಎಂತಾ ಮುಕ್ತಾಯ!. ಅಪ್ಪಯ್ಯ ಗೌಡರಿಗೆ ಸಮ ಅವು ಮಾತ್ರ.

ಬಡ್ಡಡ್ಕದಿಂದ ಸೀದಾ ರಂಗತ್ತಮಲೆ ಮಾರ್ಗಲಿಯೇ ಹೋಗಿ ರಂಗತ್ತಮಲೆಗೆ ಇಳಿವ ದಾರಿನ ಬುಟ್ಟ್ ಎಡ್ದ್‌ಗೆ ತಿರ್ಗಿ ಸಿಕ್ಕುವ ಕಾಲ್ ದಾರಿಲಿ ಗುಡ್ಡೆನ ಕರೆಂದಳೇ ಮೇಲೆ ಹತ್ತಿಕಂಡ್ ಹೋದು ಅದ್ ಬಟ್ಟಂಗಾಯಿಯವರ ಕಾಲ್ ದಾರಿ. ಬಟ್ಟಂಗಾಯಿಂತ ಹೇಳ್ರೆ ಕೇರಳದ ಪಾಣತ್ತೂರ್‌ಲಿ ಹರಿವ ಚಂದ್ರಗಿರಿ ಹಳ್ಳಂದ ಈಚೆನ ಜಾಗೆ. ಹಳ್ಳ ದಾಟಿರೆ ಆಚೆ ಕೇರಳ ಆದರೆ ಹಳ್ಳಂದೀಚೆಗೆ ಸುಳ್ಯ ತಾಲ್ಲೂಕ್‌ನ ಆಲೆಟ್ಟಿ ಗ್ರಾಮಕ್ಕೆ ಸೇರ್ದೆ. ಸುಳ್ಯ ತಾಲ್ಲೂಕ್‌ಲಿನೇ ಆಲೆಟ್ಟಿ ದೊಡ್ಡ ಗ್ರಾಮ. ಕೊಡಗ್‌ನ ಪೆರ್ಜದ ಕರೆನ ಗೊರವನ ಗುಂಡಿ ಕರೆಂದ ಸೀದಾ ನಡ್ದರೆ ಬಟ್ಟಂಗಾಯಿ ಸೇರಿಕೆ ಸುಮಾರ್ ಹದ್ನೆಂಟ್ ಕಿಲೋಮೀಟರ್ ದೂರ ಇರ್ದು. ಗ್ರಾಮದ ಮುಖ್ಯ ಜಾಗೆ ಆಲೆಟ್ಟಿಂದ ಬಟ್ಟಂಗಾಯಿ ತಲ್ಪುದು ಸುಲಬದ ದಾರಿ ಅಲ್ಲ. ಒಂದೋ ನಾ ಹೇಳ್ದಾಂಗೆ ಬಡ್ಡಡ್ಕಕ್ಕೆ ಆಗಿ ನಡ್ದ್ ಹೋಕು. ಇಲ್ಲರೆ ಕೋಲ್ಚಾರ್ ದಾಟಿ ಕಣ್ಕೂರ್, ಕೊಚ್ಚಿಲಿ ಆಗಿ ನಡ್ದೇ ಹೋಕು. ಅಲ್ಲಿನವು ಅಗತ್ಯ ಸಾಮಾನ್‌ಗಳಿಗೆ ಎಲ್ಲ ಪಾಣತ್ತೂರಿಗೆ ಹೋದರೂ ಸೊಸೈಟಿ, ಆಫೀಸ್ ಕೆಲ್ಸ, ಮಕ್ಕಳ ಶಾಲೆ ಎಲ್ಲದಕ್ಕೂ ಆಲೆಟ್ಟಿ, ಸುಳ್ಯಕ್ಕೇ ಬರೋಕಾದೆ. ಹಾಂಗಾಗಿ ಅವು ಇತ್ತ ಬಾದು ಅಪ್ರೂಪನೇ. ಅಲ್ಲಿ ಸುಮಾರ್ ಏಳೆಂಟ್ ಗಿರಿಜನ ಕುಟುಂಬಗ ಬಾರಿ ಹಿಂದೆಂದಳೇ ವಾಸ ಮಾಡಿಕಂಡೊಳೊ. ಅವು ಬಾರೀ ಶ್ರಮಜೀವಿಗ, ಎಂತಾ ಕಷ್ಟಗಳನೂ ತಡ್ಕಂಬೊದು

ಹುಟ್ಟ್‌ಂದಳೇ ಬಂದದ್. ಹಾಂಗೆಂತ ಹೇಳ್ರು ಅವ್ಕೆ ಬೇಕಾದರ ಅವೇ ಬೆಳ್ದ್ ತಿಂಬೊದು. ಕಾಡುತ್ಪತ್ತಿಗ ಸಂಗ್ರಹ ಮಾಡ್ದು. ಬೇಟೆ ಮಾಡಿ ಗಮ್ಮತ್ ಮಾಸದೂಟಲಿ ಉಂಬೊದು. ಈ ರೀತಿಲಿ ಒಂದ್ ಮಾನಸಿಕ ಶ್ರೀಮಂತಿಗೆ ಸ್ಥಿತಿ ಮತ್ತೆ ಆರ್ಥಿಕತೆಲಿನೂ ಒಂದ್ ರೀತಿಲಿ ಲಾಯ್ಕ್‌ಲೇ ಇದ್ದವು. ಅಂತ ಒಂದ್ ಕುಟುಂಬದ ಅಣ್ಣಯ್ಯ ನಾಯ್ಕಂತ ಹೇಳುವ ಅಜ್ಜಂಗೆ ಬಡ್ಡಡ್ಕಲಿನೂ ಆಸ್ತಿ ಇತ್ತ್. ಹಾಂಗಾಗಿ ಅವರ ಇಬ್ಬರ್ ಮಕ್ಕ ಬಡ್ಡಡ್ಕಲೇ ವಾಸ ಆಗಿದ್ದೊ. ಇನ್ನೊಬ್ಬ ದೊಡ್ಡ ಮಂಜ ಚೆನಿಯ ನಾಯ್ಕ ಮಾತ್ರ ಬಟ್ಟಂಗಾಯಿಲೇ ಇದ್ದದ್. ಮನ್ಸರ ಕಂಡರೇ ಹೆದ್ರುವಂತ ಪಾಪದ ಮೊನ್ಸ ಅವ ಮತ್ತೆ ಅವನ ಮಕ್ಕಳೂ ಹಾಂಗೇನೆ. ಆದರೆ ಕಾಡಿಲಿ ಹುಟ್ಟಿ ಕಾಡಲೇ ಬೆಳ್ದ್ ಅವ್ಕೆ ಕಾಡ್ ಎಂತ ಪಾಠ ಶಾಲೆ ಆಗಿತ್ತ್‌ಂತ ಹೇಳ್ರೆ ಅದೇ ಒಂದ್ ಕತೆ. ಚೆನಿಯ ನಾಯ್ಕಂಗೆ ಐದ್ ಜನ ಗಂಡ್ ಮಕ್ಕ. ಅವರ್ಲಿ ಎರಡ್ನೆನವನ ಹೆಸರ್ ನಾರಾಯಣಂತ. ಅವನ ಎಲ್ಲವೂ ಕರಿದು ಬೆಡಿ ನಾರಾಯಣಾಂತ, ಅವಂಗೆ ಇನ್ನೊಂದು ಹೆಸರೂ ಉಟ್ಟು. ಅದ್ ಹುಲಿನಾರಾಯಣಾಂತ. ಅದ್ ಯಾಕೆ ಬಾತ್ ಹೇಂಗೆ ಬಾತ್ ಬಾರಿ ಜನಕ್ಕೆ ಗೊತ್ತಿಲೆ. ಅವನ ಬೇಟೆ ಆಟಗಳ ಕಂಡ್ ಅವಂಗೆ ಅಂತ ಹೆಸರ್ ಬಂದಿರೊಕೂಂತ ಎಲ್ಲವೂ ತಿಳ್ಕಂಡೊಳೊ. ಈ ಹಿಂದೆ ಹುಲಿ ಚೋಮಣ್ಣಂತ ಹೇಳುವ ಹೆಸರ್‌ನ ವ್ಯಕ್ತಿ ರಂಗತ್ತಮಲೆಲಿ ಇದ್ದೊ. ನೆಲ್ಲಿಕಾಯಿ ತಿಂಬಕೆ ಬಾವ ಕೆಂಪನ ಹೊಡ್ಯಕೆ ನೆಲ್ಲಿಮರದ ಕರೆಲಿದ್ದ ಗುಪ್ಪೆನ ತರದ ಎರಡ್ ಕಲ್ಲ್‌ನ ನಡುಲಿ ಕುದ್ದ್‌ಕಂಡ್ ಕಾದ್‌ಕಂಡ್ ಇದ್ದ ಚೋಮಣ್ಣ ನ್ಯಾಕರಿಗೆ ಕಂಡದ್ ಪಾಪದ ಕೆಂಪ ಅಲ್ಲ. ಅಡ್ಡಡ್ಡ ನುಂಗುವಂತಾ ಅಡ್ಡ ಬಲಿಪ. ಕೆಂಪನ ಕಾದ್‌ಕಂಡ್ ಚೋಮಣ್ಣ ಹೇಂಗೆ ಕುದ್ದಿತೋ ಹಾಂಗೇನೇ ಎರ್ಡ್ ದಿನಂದ ಬೇಟೆ ಆಗದ ಹುಲಿನೂ ಹಾಂಗೇ ನೆನ್ಸಿಕಂಡ್ ಕೆಂಪನನೇ ಕಾಯ್ತಿತ್ತೋ ಏನೋ. ಬಾರದ ಕೆಂಪನ ಕಾದ್‌ಕಂಡ್ ಸಾರಿಕಂಡ್ ಹುಲಿ ಬರ್ತಿತ್ತ್. ಅದರ ಮನ್ಸ್‌ಲಿ ಕೆಂಪ ಅಲ್ಲದೆ ಬೇರ ಇತ್ಲೆ. ಕೆಂಪನನೇ ಕಾದ್‌ಕಂಡ್ ಇದ್ದ ಚೋಮಣ್ಣಂಗೆ ಹುಲಿ ಬಾದೂಂತ ಅಂದಾಜು ಇತ್ಲೆ. ಕೆಂಪ ಸಿಕ್ಕುದೂಂತ ಕಾದ್‌ಕಂಡ್ ಇದ್ದ ಹುಲಿಗೆ ಅಲ್ಲೊಬ್ಬ ಮೊನ್ಸ ಇರ್ದೂಂತಳೂ ಗೊತ್ತಿತ್ಲೆ. ಹೊತ್ತ್ ಜಾರಿಕಂಡ್ ಇತ್ತ್. ಕೆಂಪ ಬಾತೇ ಇಲ್ಲೆ. ಇನ್ನ್ ಇಲ್ಲಿ ಸುಮ್ಮನೆ ನಿತ್ತರೆ ಕತ್ತಲೆ ಆಕೆ ಮುಂದೆ ಮನೆ ಸೇರಿಕೆ ಆದುಲೇಂತ ನೆನ್ಸಿಕಂಡ್ ಚೋಮಣ್ಣ ಇನ್ನ್ ಬೇಡ ಬೆಳ್ಗರ್‌ಗೇ ಬಂದ್ ಕುದ್ದರೆ ಆದೂಂತ ನೆನ್ಸಿಕಂಡೋ. ಸ್ವಲ್ಪ ಹೊತ್ತಿನ ಮುಂದೆ ತೆಕ್ಕಿಕಂಡ್ ಬಂದ ಕಾಡ್ ಕೋಳಿ ಹೇಂಟೆ; ಅದರ ಹಿಂದೆ ಬೀಲದಾಂಗೆ ಬಂದ್‌ಕಂಡ್ ಇದ್ದ ಗತ್ತ್‌ನ ಕಾಡಕೋಳಿ ಸ್ವಲ್ಪನೇ ಕೆಳಗೆ ದಾಟಿ ಹೋದರೂ ಕೆಂಪನ ಆಸೆಲಿ ಹೊಡ್ಯದೇ ಸುಮ್ಮನಾದ್ದಕ್ಕೆ ಛೆ! ಹೊಡ್ದ್ ಬುಡಕಾಗಿತ್ತ್‌ಂತ ನೆನ್ಸಿಕಂಡ್, ಕುದ್ದಿದ್ದ ಕರೆಲಿ ಹಿಸಿದ

ಬೆಡಿ ಚೀಲನ ಹಕ್ಕಲೆ ಎಳ್ದ್ ಒಂದ್ ಈಡ್ ಎಲೆಅಡ್ಕೆನ ಅದರ್‌ಂದ ತೆಗ್ದ್, ಎಲೆನ ಕೊಡಿಕಡೆ ಮುರ್ದ್ ತೊಡೆಗೆ ಉಜ್ಜಿ ಅದರ ಬೆನ್ನ್‌ಗೆ ಸುಣ್ಣನ ಉಜ್ಜಿದೊ. ಆಗ ಕೇಳ್ತ್ ಒಂದ್ ಸಣ್ಣ ನಿಟ್ಟುಸಿರ್. ಒಂದ ಸಣ್ಣ ಗಂಟಲ್‌ನ ಒಳಗೆಂದ ಬಂದ ಗಂಭೀರ ಗುರ್‌ಗುರ್ ಸದ್ದ್. ಎಲ್ಲಿಯೋ ಕೇಳ್ದ ಶಬ್ದ. ಅಪ್ಪಯ್ಯಜ್ಜನ ಹಿಂದೆನೋ, ರಾಮಯ್ಯಜ್ಜನ ಒಟ್ಟಿಗೆನೋ ಎಲ್ಲಿಯೋ ಹೀಂಗೇ ಬೇಟೆಗೆ ಹೋಗಿರಿಕಾಕನ ಕೇಳ್ದ ಶಬ್ದ. ಏನಿರ್ದು? ಮೈ ಎಲ್ಲಾ ಒಮ್ಮೆನೇ ಅಕ್ಕಿಹೊಡ್ತ್. ಕೈಲಿದ್ದ ಎಲಡ್ಕೆ ಕೆಳಗೆ ಗೊತ್ತಿಲ್ಲದಾಂಗೆ ಬೀತ್. ಕುದ್ದ ಕಲ್ಲ್‌ಗಳೂ ನಡ್ಗುವಾಂಗೆ ಭೀಕರ ಹೂಂಕರಿಕೆ ಕೇಳ್ತ್. ಚೋಮಣ್ಣ ಕುದ್ದಲ್ಲಿಂದ ಕೆಳಗೆ ಪಿಳಿಪಿಳಿ ನೋಡಿಕಾಕನ ರುದ್ರ ಭೀಕರ ಕಣ್ಣ್‌ಲಿ ಪಟ್ಟೆ ಹುಲಿ. ಹೆಬ್ಬುಲಿ ಎಲ್ಲ ಅಸಮಾಧಾನಗಳ ಕಣ್ಣ್‌ಲ್ಲೇ ತೋರ್ಸಿಕಂಡ್ ಅದ್ ನಿತ್ತಲ್ಲಿಂದ ಸುಮಾರ್ ಇಪ್ಪತ್ತ್ ಅಡಿ ಎತ್ತರದ ಆ ಜೋಡ್ ಕಲ್ಲ್‌ಗಳ ನೋಡ್ತಿತ್ತ್. ಆಗ ಮೊಳ್ಗಿತ್ತ್ ಭೀಕರ ಘರ್ಜನೆ. ಇಡೀ ಕಾಡ್ ನಡ್ಗುವಾಂಗೆ, ಭೂಮಿ ಥರಗುಟ್ಟುವಾಂಗೆ. ಚೋಮಣ್ಣ ನಖಶಿಖಾಂತ ಒಮ್ಮೆ ನಡ್ಗಿ ಹೋತ್. ಹೊಟ್ಟೆಹಿಸಿದ ಹೆಬ್ಬುಲಿ ಒಂದ್ ಹಕ್ಕಲೆ ಅಂದರೆ ಕೇವಲ ಇಪ್ಪತ್ತ್ ಇಪ್ಪತ್ತೈದ್ ಅಡಿನ ದೂರಲಿ, ಅದರ ಎಲ್ಲಾ ಅಸಮಧಾನಗಳ ಒಟ್ಟಿಗೆ ಸೇರ್ಸಿ ಘರ್ಜಿಸಿತ್ತು. ಮೊಯ್ಸಿನ ಬಾಯಿನ ಎಂತ ಕೆಟ್ಟ ಬೊಯಿಳೋ.... ತೀರಾ ಅಸಮಧಾನಲಿದ್ದ ಅದೀಗ ಚೋಮಣ್ಣನ ಏನ್ ಮಾಡ್ದುಂತ, ಹೇಂಗೆ ಅವನ ಮೇಲೆ ಆಕ್ರಮಣ ಮಾಡ್ಲೂಂ ನೆನ್ಸಿಕಂಡ್ ಇತ್ತ್. ಚೋಮಣ್ಣ ಏನೂ ಸಾಮಾನ್ಯದವ ಅಲ್ಲ. ರಂಗತ್ತಮಲೆನ ಮೂಲ ಪಟ್ಟೇದಾರ ಅಂವ ಕಾಡ್‌ಲೇ ಹುಟ್ಟಿದವ, ಕಾಡಲೇ ಬೆಳ್ದವ. ಅಂವ ಕಾಡ್‌ನ ಒಂದೊಂದು ಸಣ್ಣ ಬದಲಾವಣೆನನೂ ಅರಗಿಸಿಕಂಡವ. ಅವಂಗೆ ಯಾವ ಹೆಚ್ಚ್ ಕಡಿಮೆನ ಬಗ್ಗೆನೂ ಹೆದ್ರಿಕೆ ಇತ್ಲೆ. ಆದರೆ ಇಂದ್; ಇಂದ್ ಮಾತ್ರ ನಡ್ಗಿ ಹೋಗಿತ್ತ್.

ಭೂತಕಲ್ಲ್‌ಲಿ ಮೊನ್ನೆ ಮೊನ್ನೆ ಒಂದೆರಡ್ ನಡೆಗ ಗುಡ್ಡೆಗೆ ಹೋದವು ಬಂದೇ ಇತ್ಲೆ. ಇತ್ತ ತಲೆಪ್ಪಳ ಐತು ಅಣ್ಣನ ದನನೂ ಒಂದ್ ಕೂಗಾಲೆ ಗುಂಡಿ ಕರೇಲಿ ಕೊಳ್ತ್ ಬಿದ್ದ್‌ಕಂಡ್ ಇತ್ತ್. ಇತ್ತ ಬೊಡ್ಡಡ್ಕದವರ ದನಂಗಳ ಒಂದೆರಡ್‌ಮೂರ್ ದೂರದ ತಡ್ಪೆ ಪಾರೆಲಿ, ಎತ್ತರಡ್ಕಲಿ ಹುಲಿ ಹಿಡ್ದ ಸುದ್ದಿ ಇತ್ತ್. ಅಪ್ಪಯ್ಯಜ್ಜಂಗೆ ಗೊತ್ತಿತ್ತೋ ಇಲ್ಲೆನೋ. ಅವು ಇತ್ತೀಚೆಗೆ ಬೆಡಿತೆಕಂಡ್ ಹೋದು ಕಡಿಮೆ ಮಾಡಿದ್ದೊನೊ ಏನೋ... ಜಾನುವಾರ್‌ಗ ಇತ್ತೀಚೆಗೆ ಕಡಿಮೆ ಆಗ್ತಿದ್ದೊ. ಅದ್ ಎಲ್ಲವ್ಕೂ ಗೊತ್ತಿತ್ತ್. ಚೋಮಣ್ಣ ಹೆರ್ದ್‌ರ್ತಲೆ. ಅವಂಗೆ ಒಂದ್ ಸುರುಗೇ ಗೊತ್ತಾಗಿತ್ತ್. ನಿತ್ತ್ ಹೆಜ್ಜೆಂದ ಆ ಹುಲಿ ಹಾರಿ ಮುಟ್ಟಿಕಿಲೇಂತ. ಮತ್ತೊಂದ್, ಅವನ ಮೈ ಅಕ್ಕಿ ಹೊಡ್ದಿರ್ದು, ಅವ ಒಮ್ಮೆನೇ ಆ ಹುಲಿನ ಭೀಕರ ಘರ್ಜನೆಗೆ

ನಡ್ಗಿ ಹೋಗಿರ್ದುರ್, ಹಾಗಿಂದ್ದರೂ ಅವ ಹೆದರ್ತ್‌ಲೆ. ಅವನ ನೆತ್ತರ್‌ಲಿ ಹೆದ್ರಿಕೆ ಇತ್ತ್‌ಲೆ. ಅವ ಸಾಮಾನ್ಯ ಅಲ್ಲ. ಕಾಡ್ ಕಾಡ್‌ಗಳ, ನಿತ್ಯ ಸ್ವರೂಪಗಳ ಕಂಡ್ ಆದರ ಒಟ್ಟಿಗೇ ಒಡನಾಡಿಯಾಗಿ ಬೆಳ್ದವ. ಅವಂಗೆ ಕಾಡ್‌ನ ಮರಮರ ಹೇಂಗೇನೊ ಕಾಡ್‌ನ ಪ್ರಾಣಿ ಪ್ರಾಣಿಗಳೂ ಹಾಂಗೇನೇ. ಆಂದರೆನೂ ಇಂದ್‌ನ ಪರಿಸ್ತಿತಿ ಹಾಂಗೆ ಇತ್ಲೆ. ಅವಂಗೆ ಒಂದ್ ಅನಿರೀಕ್ಷಿತ ಕ್ಷಣ ಎರ್ದಾಗಿತ್ತ್. ಎಂತಾ ಎದ್‌ರ್ ಎಂತದರ ಎದ್‌ರ್. ಹುಲಿನಂತಾ ಹುಲಿ. ಹಸಿದ ಹೆಬ್ಬುಲಿ ಕಣ್ಣೆದುರಿಗೇ ಎದುರಾಗಿ ನಿತ್ತ್‌ತ್ತ್. ಅಂತಾ ಕ್ಷಣನ ಯಾರೂ ಊಹಿಸಿಕೂ ಸಾಧ್ಯ ಇಲ್ಲೆ. ಅಂತಾ ಕ್ಷಣ ಅದ್.

ಚೋಮಣ್ಣ ನಖಶಿಖಾಂತ ನಡ್ಗಿದ್ದರೂ ಅವ ಹೆದರ್ತ್‌ಲೆ. ಅವ ಶ್ರಮಜೀವಿ. ಕಾಡ್‌ನ ಸಮಸ್ತ ಹಕ್ಕ್‌ಗಳನೂ ಪಡ್ಕಂಡ್ ಎಲ್ಲನೂ ತಿಳ್ಕಂಡ ಒಬ್ಬ ಗಿರಿಜನ. ಅವಂಗೆ ಎಲ್ಲನೂ ಗೊತ್ತಿತ್ತ್. ಆದರೆ ಅಲ್ಲಿ ಅವನ ಹಕ್ಕಲೆ ಇದ್ದದ್ ಒಂಟಿ ಕೊಳವೆನ ಕೇಪ್‌ನ ಬೆಡಿ. ಅದ್ಕೆ ಒಂದ್ ಇತಿ ಮಿತಿ ಉಟ್ಟು ಅದೇ ಅವ ಒಮ್ಮೆನೇ ಹೆರ್ದಿಕೆ ಕಾರಣ ಆಗಿತ್ತ್. ಅವ ಇಂದ್ ಬಂದದ್ ಕೆಂಪಕ್ಕೆ ಕುದ್ರಿಕೆ. ಅದ್ಕೆ ಅವನ ಈಡ್ ಇದ್ದದ್ ಬರೇ ಚಿಲ್ಲ್‌ನ ಲೋಡ್. ಅದರ್ಲಿನೂ ನಾಲ್ಕೆ ನಂಬರ್‌ದ್, ಒಂದ್ ನಂಬರ್ದ್‌ನೂ ಮಿಶ್ರ ಚಿಲ್ಲ್‌ಗ ಒಂದೆರ್ಡ್ LG ನೂ ಇದ್ದಿರ್ದು. ಒಂದೆರ್ಡ್ ಕಣ್ಣ್ ಎದ್‌ರ್ಗೆನೇ ನಿತ್ತ್. ಎಲ್ಲಾ ಹೋರಾಟಕ್ಕೆ ನಿತ್ತಾಗಿದ್ದ ಅಂತಾ ಹೆಬ್ಬುಲಿಗೆ ಈ ಈಡ್ ಸಾಕೋ.... ಮೈಯಲ್ಲ, ಹೃದಯನೇ ಅದೊಂದೇ ಕಾರಣಕ್ಕೆ ಹೆದ್ರಿ ಹೋಗಿತ್ತ್. ಚೋಮಣ್ಣ ಬೆಡಿಹಿಡ್ದ್ ಊರ್‌ನ ಹತ್ತ್ ಹಿರಿಯರ ನಡುಲಿ ಓಡ್ಯಾಡಿತ್ತ್. ಯಾವ ಪ್ರಾಣಿಗೆ ಎಲ್ಲಿ ಹೊಡ್ಯೊಕು, ಯಾವುದರ ಬರೇ ಓಡ್ಸಿಕೆ ಹೊಡ್ಯೊಕು. ಯಾವುದೂ ಆಗದಿದ್ದ ಕಾಲಲಿ ಎಷ್ಟೇ ಸಣ್ಣದಾಗಿದ್ದರೂ ಚಿಲ್ಲ್ ಎಲ್ಲಿ ದಾಟಿ ಹೋದು ಎಲ್ಲಾನೂ ಗೊತ್ತಿತ್ತ್. ಕೈಪಾರಿಕೆಗೆ ಹೊಡಿದು, ನೆತ್ತಿನ ಎದುರೇ ಹೊಡಿದು, ಕೆಬಿ ಚೆಂಡೆಗೆ ಹೊಡಿದು, ಓಡಿ ಕಾಕನ ನಾಲ್ಕ್ ನಡೆನ ನಡುಲಿ ಹೊಡಿದು, ಇದ್ ಸಾಮಾನ್ಯ– ಆದರೆ ಅಸಮಾನ್ಯ ಸ್ಥಿತಿಲಿ; ಆದರೆ ಇನ್ನ್ಯಾವುದೇ ಇಲ್ಲದ ಕಡೇ ಸ್ಥಿತಿಲಿ ಮಾತ್ರ ಒಬ್ಬ ಅಸಮಾನ್ಯ ಬೇಟೆಗಾರ ಗುರಿ ಹಿಸುದು ಕಣ್ಣಿಗೆ, ಅದ್ ಯಾಕೇಂತ ಹೇಳ್ರೆ... ಎದ್ರ್‌ಗಿರುವ ಪ್ರಾಣಿಂದ ಯಾವುದೇ ರೀತಿಲಿನೂ ನಂಗೆ ಉಳಿಗಾಲ ಇಲ್ಲೇಂತಾಕನ ಮಾತ್ರ ಒಂದ್ ಗುರಿನ ತಾಂಗ್‌ಸುವ ಬೇಟೆಗಾರನ ಕಡೇ ಅವಕಾಶ ಅದ್. ಚೋಮಣ್ಣನ ಮನ್ಸ್‌ಲಿ ಬಾತ್. ನಾ ಉಳ್ಯೊಕೂಂತ ಆದರೆ ಅದರ ದೃಷ್ಟಿ ಹೋಕು ಅಷ್ಟೇ. ಹೆಗಲಿಗೆ ಅನಿಸಿದ ಬೆಡಿನ ಬುಡಲಿ ಚೋಮಣ್ಣನ ತಲೆ ಇತ್ತ್. ಬೆಡಿನ ನೋಟ ಸರಿಯಾಗಿ ಕಣ್ಣೆರಡರ ನಡು ಇತ್ತ್. ಯಾವುದೋ ದ್ವೇಶದಾಂಗೆ ನೋಡ್ತಿದ್ದ ಹುಲಿಗೆ ಎದುರಿಗೆ ಇರಂವ ಕದಲಿಕಾಕನ

ಅದ್ಕೊ ನಾ ನಿತ್ತ ನೆಲೆ, ಗುರಿ ಸರಿ ಇಲ್ಲೆಂತ ಆಗಿ ಒಮ್ಮೆ ಒಂದು ಕ್ಷಣ ಬಲಕ್ಕೆ ತಿರ್ಗಿತ್. ಆಗ; ಆ ಕ್ಷಣಕ್ಕೆ ಸಿಕ್ಕಿತ್ತ್ ಚೋಮಣ್ಣಂಗೆ ಆಯ ಸ್ಥಳ. ಎರ್ಡ್‌ನ ಕೈ ಮುಂದೆ ಊರಿಕಾಕನ ಕಾಂಬ ಕೈಪಾರಿಕೆನ ನಡು ಸ್ಥಳ. ಯಾವ ಎಲುನೂ, ಏನೂ ಅಡ್ಡಿ ಆಗದೆ ಗುಂಡ್ ದಾಟಿ ಹೋಗಿ ಎದೆನ ತಾಂಗುವ ಒಂದೇ ಜಾಗೆ, ಸರಿಯಾದ ಕೈಪಾರಿಕೆ ಗುರಿ. ಮೇಲೆಳ್ದ ಕುದುರೆ, ಕೊತ್ತೆಳ್ದಾಕನ ಕೆಳಗೆ ಬಿದ್ದಿತ್ತು. ಆ ಕ್ಷಣ ಒಂದ್ ಹನ್ನೆರಡ್ ಮೆಟ್ಟ್‌ಗೆ ಮೀರ್ದ ಹೆಬ್ಬುಲಿನ ಸಾವುದ ಕಾಲದ ಅತ್ಯಂತ ದೊಡ್ಡ ಘರ್ಜನೆ, ಒಟ್ಟಿಗೆ ಕೇಪುನ ಬೆಡಿಂದ ಬಂದ ದೊಡ್ಡ ಡಂಕಾಂರ. ಇಡೀ ಕಾಡ್ ಒಮ್ಮೆ ನಡ್ಗಿ ಶಬ್ದನೇ ಇಲ್ಲದೆ ಸುಮ್ಮನಾಗಿತ್ತ್. ಚೋಮಣ್ಣನ ಯಾವುದೇ ಅಂಗಾಂಗಗಳೂ ಎಲ್ಲ ಚೇತನಗಳ ಕಳ್ಕಂಡ ಹಾಂಗೆ ನಿಶ್ಯಬ್ದ ಆಗಿತ್ತ್. ನರನಾಡಿಲಿ ಶಕ್ತಿನೇ ಇಲ್ಲದ ರೀತಿಲಿ ಹಾಸ್ ಬಂಡೆಹಾಂಗಿದ್ದ ಆ ಬಂಡೆನ ಮೇಲೆ ಚೋಮಣ್ಣ ಅಂಗಾತ ಮಲ್ಗಿತ್. ಇಡೀ ಕಾಡೇ ಸುಮ್ಮನಿತ್ತ್. ಹಿಂಬತ್ ಕತ್ತಲಾಕನ ಕಿರ್ಚುವ ಕಾಚ್‌ಕುಳ್ಳ, ದಿನ ಇಡೀ ಜೀಂ, ಜೀಂ ಂತ ಹೇಳುವ ಹುಳಗ, ಯಾಕೆ, ದೂರಲಿ, ತುಂಬಾ ದೂರಲಿ ಭೂಂಕ್, ಭೂಂಕ್‌ಂತ ಹೇಳುವ ಮುಚ್ಚಗ ಎಲ್ಲನೂ ಸುಮ್ಮನಾಗಿದ್ದೊ. ಇದೆಲ್ಲ ನಡ್ಕಂಡ್ ಇರಿಕನ ಸಿರ್ವೆ ಮರದ ಮೇಲೆ ಇದ್ದ ಗುಂಪು ತಪ್ಪಿದ ಕುರೆ ಒಂದು ಎಲ್ಲ ಮೌನನ ಹೊಡ್ದ್ ಹಾಕುವಾಂಗೆ ಒಮ್ಮೆನೇ ಕಿರ್ಚಿಕೆ ಸುರುಮಾಡ್ತ್.

ಹೊತ್ತ್ ಕಂತಿದ್ ಆಗಲೇ ಕತ್ತಲೆ ಆಗಿತ್ತ್. ಎಷ್ಟೇ ಅನುಭವಸ್ತ ಆಗಿದ್ದರೂ ಹೊಡ್ಡದ್ ಹೆಬ್ಬುಲಿನ. ಗುರಿ ಸರಿ ಇದ್ದರೆನೂ ಸರಿಸುಮಾರ್ ಇಪ್ಪತ್ತ್ ಅಡಿ ದೂರಲಿ ನಿತ್ತ್ ಅಬ್ಬರ್ಸಿ ತಿಂಬಕೆ ಬಂದ ಹುಲಿಗೆ ಹೊಡ್ದ ಗುಂಡ್ ಅದ್, ಎದೆ ನಡ್ಗಿನೇ ಹೋಗಿತ್ತ್. ಕೈ ಕಾಲ್‌ಗ ಇನ್ನೂ ದರ್ಪಿಕಂಡೇ ಇದ್ದಾಂಗೆ ಇತ್ತ್. ಹುಲಿ ಸತ್ತುಟ್ಟೂಂತ ಗೊತ್ತಾಗಿತ್ತ್. ಆದರೆ ಇಳಿಯಕೆ ಆಗ್ತಿತ್ತ್ಲೆ. ಕುದ್ದ ಕಲ್ಲ್‌ಲಿ ಚೋಮಣ್ಣಣ್ಣ ಕುದ್ದ್‌ಕಂಡೇ ಇದ್ದೊ.

ಅತ್ತ ರಂಗತ್ತಮಲೆಲಿ ಬೆಡಿತೆಕಂಡ್ ಹೋದ ಚೋಮಣ್ಣ ಇನ್ನೂ ಬಾರದಿರಿಕನ ಮನೆಲಿ ಚಿಂತೆ ಕುದ್ದಿತ್ತ್. ಸಣ್ಣ ಸಣ್ಣ ಮಕ್ಕ. ಹೆಣ್ಣ್‌ಗೆ ಎಂತದ್ ಮಾಡೊಕೂಂತಲೂ ಗೊತ್ತಾತ್ಲೆ. ವಿಷಯ ತಿಳ್ದ್ ಸುತ್ತ್ ಮುತ್ತ್‌ನವು ಎಲ್ಲವೂ ಸೇರಿ ಅವ್ಕೆ ಗೊತ್ತಿದ್ದ ಅಂದಾಜ್‌ನ ಮೇಲೆ ಕಾಡ್ ಕಡೆಗೆ ಸೂಟೆ, ಕತ್ತಿ, ಬೆಡಿ ದೊಣ್ಣೆಲಿ ಹೊರ್ಟೊ. ಅವರ್ಲಿ ಕೆಲವುಕೆ ಚೋಮಣ್ಣ ಕೆಂಪ ಹೊಡ್ಯಕೆ ಕುದ್ರುವ ಕಡಾವು ಗೊತ್ತಿತ್ತ್. ಅವು ಸೀದಾ ಜೋರ್‌ಲಿ ಕರ್ಕಂಡ್ ಚೋಮಣ್ಣ ಕುದ್ದಲ್ಲಿಗೇ ಬಂದೋ. ಅವರ ಬೊಬ್ಬೆಗೆ ಕುತ್ತ ನಿತ್ತಿದ್ದ ಜೋಡ್ ಬಂಡನ ಕಡೆಂದ ಉತ್ತರ ಬಂದಿತ್ತ್. ಎಲ್ಲವೂ ಅಲ್ಲಿ ಬಂದ್ ಸೇರ್ದೊ. ಯಾರ ಮಾತಿಗೂ ಉತ್ತರ ಕೊಡದ ಚೋಮಣ್ಣ ಕೆಳಗೆನ

ಗುಂಡಿಗೆ ಕೈ ತೋರ್ಸಿದೊ. ಎಲ್ಲವರ ಗುಂಡಿಗೆನೂ ಒಮ್ಮೆ ಒಡ್ದಂಗೇ ಆಗಿತ್ತ್. ಅಲ್ಲಿ ಸರಿಸುಮಾರ್ ಹನ್ನೆರಡ್ ಮೆಟ್ಟ್‌ನ ಹೆಬ್ಬುಲಿ ಒಂದ್ ಮಲ್ಗಿದಾಂಗೆ ಸತ್ತ್ ಬಿದ್ದಿತ್ತ್. ಚೋಮಣ್ಣ ಹುಲಿ ಹೊಡ್ದಿತ್ತ್. ಅಂತಿಂತಾ ಹುಲಿ ಅಲ್ಲ ಅದ್. ಸುತ್ತ್ ಊರ್‌ಲಿ ತುಂಬಾ ಜನರ ಜಾನುವಾರ್‌ಗೆ ತೊಂದರೆ ಕೊಡ್ತಿದ್ದ ಹೆಬ್ಬುಲಿ ಅದ್. ಮನೆಗೆ ಬಂದ ಚೋಮಣ್ಣಂಗೆ ಆ ಹುಲಿ ಸನ್ನಿ ಕೆಲವು ದಿನ ಕಾಡಿತ್ತ್. ಆದರೆ ಅವನ ಹೆಸರ್ ಆಗಳೇ ಕಾಗಡೆ ಈಚೆನ ಬಡ್ಡಡ್ಕ, ಕಲ್ಲಪಳ್ಳಿ – ಆಚೆನ ಬೂತಕಲ್ಲ್, ಕುಂಚಡ್ಕ, ಕುಡಕಲ್ಲ್, ನಾರ್ಕೋಡು ದಾಟಿ ಹಬ್ಬಿ ಹರ್ದ್ ಹೋಗಿತ್ತ್. ರಂಗತ್ತಮಲೆ ಚೋಮಣ್ಣ ಹುಲಿ ಹೊಡ್ತ್‌ಗಡಾಂತ. ಗಡಗಡ ಸುದ್ದಿ ಬೆಳ್ದಾಂಗೆ ಚೋಮಣ್ಣ ಈಗ ಹುಲಿ ಚೋಮಣ್ಣ ಆಗಿತ್ತ್. ಅದ್ ಎಲ್ಲವ್ಕೂ ತಿಳ್ದಿತ್ತ್. ಹಾಂಗೆನೇ ಬೆಡಿ ನಾರಾಯಣ ಹುಲಿ ನಾರಾಯಣ ಆದ್ದ್ ಅದೊಂದ್ ದೊಡ್ಡ ಕತೆ. ನಿಜಕ್ಕೆನೂ ನಾರಾಯಣನ ಜೀವನದ ಅದ್ಭುತ ಸಾಹಸ. ಬಡ್ಡಡ್ಕಲೇ ವಾಸ ಇದ್ದ ನಾರಾಯಣಂಗೆ ಅಲ್ಲಿ ನಾಲ್ಕ್ ಎಕ್ರೆನಷ್ಟ್ ಜಾಗೆ ಇತ್ತ್. ಅದರ್ಲಿ ಒಳ್ಳೆಮೆಣ್ಸ್, ಬೀಜ ಬುಟ್ರೆ ಮರಗೆಳ್ಸ್ ಅವಂಗೆ ಸಿಕ್ಕುವ ಉತ್ಪತ್ತಿ. ಅವ ಒಳ್ಳೆ ಬೆತ್ತದ ಮೆಡ್ಚಲ್‌ನವ. ಅಪ್ರೂಪಕ್ಕೆ ಮನೆಂದ ಕೆಳಗೆ ಬಡ್ಡಡ್ಕ ದೊಡ್ಡ ಮನೆಗೆ ಕೆಲ್ಸಕ್ಕೆ ಹೋದು ಇದ್ದರೆನೂ ಅವ ಹೆಚ್ಚಾಗಿ ಹೆಡಗೆ ಮಾಡಿಕೆ ಬೆತ್ತ ಹುಡ್ಕಿಕಂಡ್, ಇಲ್ಲದಿದ್ದರೆ ಹಂದಿ ಹೆಜ್ಜೆನ ಹಿಂದೆನೇ ಹುಡ್ಕಿಕಂಡ್ ಬೇಟೆಗಾಗಿ ಬೆಡಿ ಹಿಡ್ದ್ ಕಾಡು ಸುತ್ತುದೇ ಅವನ ಅಭ್ಯಾಸ. ನಿಜ ಹೇಳೋಕೂಂತಾದರೆ ಅವ ಮನೆಂದ ಹೆಚ್ಚ್ ಕಾಡ್‌ಲೇ ಇರ್ತಿತ್ತ್. ಅವಂಗೆ ಕಾಡಲಿ ಇದ್ದ ಜ್ಞಾನ ಎಷ್ಟ್‌ಂತ ಹೇಳಿಕೆ ಆದುಲೆ. ಅಂತ ವಿಶೇಷತೆ ಅವನಲ್ಲಿ ಇತ್ತ್. ಕಾಡ್‌ಲಿ ಪ್ರಾಣಿಗ ದಾಟಿದ ದಾರಿಲಿ ಬರೇ ಮೂಕಳ್ಮೆಂದ ಯಾವ ಪ್ರಾಣಿ ದಾಟಿದ್‌ಂತ ಹೇಳ್ತಿತ್ತ್. ದರ್ಗ್‌ನ ಮೇಲೆ ಫರ್ಲಾಂಗ್ ದೂರಲಿ ಹೆಜ್ಜೆ ಹಿಸುವ ಪ್ರಾಣಿಗಳ ಕಾಲ್‌ನ ಶಬ್ದಕ್ಕೆ ಕೆಬಿ ಕೊಟ್ಟರೆ ಇಷ್ಟೇ ದೂರಲಿ ಇಂತದೇ ಬಂದ್‌ಕಂಡ್ ಉಟ್ಟೂಂತ ಗೊತ್ತಾದು. ಹಕ್ಕಿಗ ಮರ್ದುವ ಶಬ್ದ, ಕುರೆಗಳ ಕಿರ್ಚಾಟ, ಮುಚ್ಚದ ಭೂಂಕ್, ಎಲ್ಲದರ್ಲಿನೂ ಸಹಜ ಯಾವುದೂ ಅಸಹಜ ಯಾವುದೂಂತ ಅವಂಗೆ ಗೊತ್ತಾಗ್ತಿತ್ತ್. ದಾರಿನ ಪೊಯ್ಯಮಣ್ಣ್‌ನ ಮೇಲೆ ಒಂದ್ ಹಂದಿನ ಅಸ್ಪಷ್ಟ ಹೆಜ್ಜೆ ಗುರ್ತ್‌ನನೂ ಕಂಡ್ ಅದ್ ಇಂದೇ ದಾಟಿದ್‌ಂತ ಹೇಳಿ ಹಂದಿ ಹಿಸಿದ ಹೆಜ್ಜೆಗುರ್ತ್‌ಗಳನೇ ಹಿಡ್ದ್ ಮೆಲ್ಲಂಗೆ ಹೋಗಿ ಹೋಗಿ ಹಂದಿ ಮಲ್ಗಿದಲ್ಲಿಗೇಮುಟ್ಟಿ ಹೊಡ್ದ ಹಂದಿಗ ನೂರಾರ್. ಅವನ ಅನುಭವ, ಅವನ ಬೇಟೆನ ಛಲ, ಎಷ್ಟೊತ್ತಿಗೂ ಹೆಗಲ್ ಮೇಲೆ ಇರ್ತಿದ್ದ ಬೆಡಿನ ಕಂಡ್ ಅವಂಗೇ ಆಗಲೇ ಬೆಡಿನಾರಾಯಣಂತ ಹೆಸರಾಗಿತ್ತ್. ತುಂಬ ಜನ ಅವನ ನಾರಾಯಣ ಹೆಸರ್‌ನ ಬುಟ್ಟ್ ಬೆಡಿಂತಳೂ ಕರ್ದವೆ. ಒಮ್ಮೆ ಕಾಡ್‌ಗೆ ಹೊಕ್ಕಮೇಲೆ ಅವಂಗೆ ಹೊಟ್ಟೆ ಹಿಸುದೇ ಗೊತ್ತಾಕ್ತಿಲ್ಲೆ. ಅವನ

ಹೊಟ್ಟೆ ಪಾಡ್‌ಗೆ ಅವಂಗೆ ಎಲ್ಲನೂ ಕಾಡಲೇ ಸಿಗ್ತಿತ್ತ್. ಕಾಡ್‌ಲಿ ಎಲ್ಲೆಲ್ಲಿ ನೀರ್‌ನ ತೊರೆ ಉಟ್ಟು, ಒಂದು ವೇಳೆ ನೀರೇ ಸಿಗದಿರಿಕಾಕನ ಯಾವ ರೀತಿಲಿ ಎಲ್ಲಿ ನೀರ್ ಸಿಕ್ಕುದು ಅವಂಗೆ ಗೊತ್ತಿತ್ತ್. ಇಳಿಂಜಿರ್ ಬೊಳ್ಳಿ, ಬೆತ್ತ ಮತ್ತೆ ಅಂತ ಇನ್ನೂ ಕೆಲವು ಕಾಡ್ ಬೊಳ್ಳಿಗಳ ಕಡ್ದ್ ಅದಂರ್ದ ಸುರಿವ ನೀರ್‌ನ ಕುಡಿದು, ಹೊಟ್ಟೆ ಹಿಸಿರೆ ಸಣ್ಣ ಬೈನೆ ದೆಯ್ಯಿಗಳ ಕಡ್ದ್, ಸಿಗ್ದ್ ನಡೂನ ಬೆಂಡ್‌ನ, ನರೆ ಬೊಳ್ಳಿಗಳ ಎಳ್ಳಿ ಹಸಿ ನರೆ ಗೆಂಡೆಗಳ ತಿಂಬೊದು. ಹಣ್ಣ್‌ಗಳ ಕಾಲಲಿ ಅಂತೂ ಅವಂಗೆ ತಿಂಬಂತದ್ ಕಾಡ್‌ಲಿ ಬೇಕಾದಷ್ಟ್ ಸಿಕ್ಕುದು. ಎಲ್ಲಿಯೋ ಕುರೆಗಳೋ ಬಾವುಲಿಗಳೊ ತೆಕಂಡ್ ಹೋಗಿ ಕಾಡ್‌ಲಿ ಬಿದ್ದ್ ಹುಟ್ಟಿದ ಕಮ್ಮುನ ಬುಡಂದ ಅಡ್ಕೆನ ಹೆರ್ಕಿ ಕಾಡ್‌ಲೇ ಇರುವ ಕಾಡ್ ವೀಳ್ಯದೆಲೆನ ಪಾಂಡವರ ಎಲೆಂತ ಹೇಳಿ ತಂದ್ ಎಲಡ್ಕೆನೂ ತಿಂಬೊದು. ಕಾಡುತ್ಪತ್ತಿಗಳೂ ಅವನ ಜೀವನಲಿ ಒಂದ್ ಭಾಗ ಆಗಿತ್ತ್. ಅಂತ ಕಾಲಲಿ ಅವಂಗೆ ಕಾಡ್‌ಲ್ ಸಿಕ್ಕುವ ಒಳ್ಳೆ ಮೆಣ್ಸ್, ಕಾನಕಜೆ, ಉಂಡೆ ಹುಳಿ, ಮಂತ್ ಹುಳಿನಂತ ಕಾಡ್ ಉತ್ಪತ್ತಿಗ ಎಲ್ಲಾ ಅವನ ಸ್ವಂತದ ವಾಣಿಜ್ಯ ಬೆಳೆಗಳ ಹಾಂಗೇ ಇದ್ದೊ. ಒಟ್ಟ್‌ಲಿ ಹೇಳ್ರೆ ಅವ ಒಬ್ಬ ಕಾಡ್ ಮೊನ್ಯಂತಳೇ ಹೇಳಕ್. ಅಂತ ನಾರಾಯಣನ ಮುಂದೆ ಬೊದ್ಕಿಕೆ ಬೇಕಾದಷ್ಟ್ ದಾರಿಗ ಇತ್ತ್. ಯಾವ ವಿಶ್ವ ವಿದ್ಯಾಲಯಲಿನೂ ಅವ ಅನುಭವಲಿ ಕಲ್ತಷ್ಟ್ ಬೊದ್ಕುವ ವಿದ್ಯೆ ಇಲ್ಲೆ. ಯಾವ ವಿದ್ಯಾಲಯನೂ ಹಾಂಗೇ ಬೊದ್ಕುವ ರೀತಿ ತಿಳ್ಸಿತ್ಲೆ.

ದೊಡ್ಡಮನೆ ಬಾಬಣ್ಣನ ಮಂಜ ಕುಞ್ಞಣ್ಣಗೆ ನಾರಾಯಣನೊಟ್ಟಿಗೆ ಬಾರಿ ಒಳ್ಳದ್. ಕುಞ್ಞಣ್ಣಂಗೊ ಬೇಟೆನ ಹುಚ್ಚ್. ಆದರೆ ನಾರಾಯಣನೊಟ್ಟಿಗೆ ಕಾಡ್ ಸುತ್ತಿಕಾಕನ ಅವಂಗೆ ಸಾಕ್ ಸಾಕಾಕ್ತಿತ್ತ್. ಕಾಡ್ ಊರ್ ಆಗಿದ್ದ ನಾರಾಯಣ, ಕಾಡ್‌ನ ಕಾಡ್‌ಂತಳೇ ತಿಳ್ಕಂಡಿದ್ದ ಕುಂಞಣ್ಣ. ಹಾಂಗಾಗಿ ನಾರಾಯಣನೊಟ್ಟಿಗೆ ಸಮಸಮ ಕಾಡ್ ಸುತ್ತಿಕೆ, ಉಂಬ್‌ಳ್ ಕಚ್ಚಿಸಿಂಬಕೆ ಹೊಟ್ಟೆ ಕಟ್ಟಿಕೆ ಆಗ್ತಿತ್ಲೆ. ಅಂದರೆನೂ ಕಾಡ್ ಹತ್ತಿಕೆ ಅವಂಗೆ ನಾರಾಯಣ ಬೇಕೇ ಬೇಕು. ನಾರಾಯಣಂಗೂ ಹಾಂಗೇನೆ. ಎಲ್ಲ ಆಗ್ ಹೋಗ್‌ಗೆ ಬಡ್ಡಡ್ಕ ದೊಡ್ಡಮನೇವೇ ಆಕು. ಅವ ಅವನ ಅಪ್ಪನ ಬೆಡಿಲಿ ಹೊಡ್ದದರ್‌ಂದ ಬಡ್ಡಡ್ಕದವರ ಬೆಡಿಲಿ ಹೊಡ್ದದೇ ಜಾಸ್ತಿ. ಕೇಪುನ ಒಂಟಿ ಕೊಳಾಯಿ ಬೆಡಿಲಿನೇ ಅಭ್ಯಾಸ ಆಗಿದ್ದ ಅವಂಗೆ ಸುರು ಸುರುಗೆ ಜೀಕೋ ಜರ್ಮನ್ ಜೋಡ್ ಕೊಳೆ ಬೆಡಿ ಹಿಡ್ದ್ ಗುಂಡ್ ಹೊಡ್ದರೆ ತಪ್ಪುದೇ ಹೆಚ್ಚಾಗಿತ್ತ್. ಅದ್ ಸರಿನೂ ಆಗ್ತಿತ್ಲೆ. ಆದರೆ ದಿನ ಹೋದಾಂಗೆ ಅವಂಗೆ ಆ ಬೆಡಿನಷ್ಟ್ ಇಷ್ಟ ಬೇರೆ ಬೆಡಿ ಆಗ್ತಿತ್ಲೆ. ಇನ್ನ್ ಕುಞ್ಞಣ್ಣಂಗೆ ಆಲೆಟ್ಟಿಲಿ ಒಂದ್ ಅಂಗಡಿ ಇತ್ತ್. ಅಲ್ಲಿ ಎಲ್ಲಾ ಸಾಮಾನ್ ಸಿಗ್ತಿತ್ತ್. ಕೈಲಿ ದುಡ್ಡ್ ಇಲ್ಲದೇ ಮನೆಲಿ ಸಾಮಾನ್ ಮುಗ್ದರೆ ಅವ ಏನೂ ಹೆದ್‌ರ್ತಿತ್ತ್‌ಲೆ. ಸೀದಾ ಆಲೆಟ್ಟಿಗೆ ನಡ್ದರೆ ಆತ್. ಅವಂಗೆ ಗೊತ್ತಿತ್ತ್.

ಅಣ್ಣನ ಅಂಗ್ಡಿಲಿ ಸಾಲ ಸಿಕ್ಕಿಯೇ ಸಿಕ್ಕುದೂಂತ. ಕುಞ್ಞಣ್ಣಂಗೂ ಗೊತ್ತಿತ್ತ್. ಹೆಸರ್ ಸಾಲಾಂತ ಆದರೂ ಈ ಸಾಲ ತೀರ್ದು ದುಡ್ಡ್‌ಲಿ ಅಲ್ಲೇ ಅಲ್ಲಂತ. ಕಾಡ್‌ಂದ ಕೆಂಪನೋ, ಬೊರ್ಕನೋ, ಹಂದಿ ಮಾಸದ ಕಟ್ಟೋ ತಂದ್ ಕೊಡಿಕನ ಆ ಸಾಲ ತೀರ್ದೆಂತ. ಒಂದ್ ರೀತಿಲಿ ಯಾವುದೇ ಒಪ್ಪಂದ ಅಲ್ಲದಿದ್ದರೂ ಈ ತರಲಿ ವೈವಾಟ್ ನಡ್ಕಂಡ್ ಹೋಗ್ತಿತ್ತ್.

ಅಂತ ನಾರಾಯಣ ಒಂದ್ ದಿನ ಬೊಳ್ಳೊಳ್ಳಿಗೇಂತ ಹೇಳ್ರೆ ಇನ್ನು ಕುಞ್ಞಣ್ಣ ಆಲೆಟ್ಟಿಗೆ ಅಂಗ್ಡಿಗೆ ಹೊರ್ಡಿಕೆ ಮುಂದೆನೇ ಬಂದಿತ್ತ್. ಕೈಲಿ ಎಂತಾ ಮಾಸದ ಕಟ್ಟೋ ಇಲ್ಲೆ. ಏನೋ ವೈವಾಟ್ ಇರೊಕೂಂತ ಕುಞ್ಞಣ್ಣಂಗೆ ಗೊತ್ತಾತ್. ಕುಞ್ಞಣ್ಣನ ಅಪ್ಪ ಬಾಬಣ್ಣಣ್ಣ ಎಂತಾ ನಾರಾಯಣ ಕಾಡ್‌ಗೆ ಮಿನಿ ಹೋತ್ಲೆನೋಂತ ಕೇಳ್ದೊ. "ಇಲೆ ಅಣ್ಣ, ನಾ ಬಟ್ಟಂಗಾಯಿಗೆ ಹೊರ್ಟದ್. ಅಣ್ಣನ ನೋಡಿ ಪೋಯಿಂತ ಬಂದದ್." ಮಂಜನ ಹಕ್ಕಲೆ ಅವಂಗೆ ಎಂತಾ ವ್ಯವಹಾರ ಇರ್ದೂಂತ ಅವ್ಕೆನೂ ಗೊತ್ತಿತ್ತ್. "ಆದು, ಬೇಗ ಮಾತಾಡ್ ಅವ ಆಲೆಟ್ಟಿಗೆ ಹೊರ್ಟುಟು"ಂತ ಹೇಳಿ ಅವು ಸುಮ್ಮನಾದೊ. ಅಂದರೂ ಕುಞ್ಞಣ್ಣ ಹೊರ್ಟ್ ಬೈಕ್ ಹತ್ತುವವರೆಗೂ ಸುಮ್ಮನೇ ಇದ್ದವ, "ಅಣ್ಣ ನಾನೂ ನಿಮ್ಮೊಟ್ಟಿಗೆ ಆಲೆಟ್ಟಿಗೆ ಬನ್ನೆ ಅಣ್ಣಂತ ಹೇಳ್ತ್. ಓ ಇವಂದ್ ಎಂತದೋ ದೊಡ್ಡ ವೈವಾಟೇ ಇರೋಕೂಂತ ನೆನ್ಸಿಕಂಡ ಕುಞ್ಞಣ್ಣ ಬೈಕ್ ಸ್ಟಾರ್ಟ್ ಮಾಡಿ ಹತ್ತ್‌ಂತ ಹೇಳ್ತ್. ತಕ್ಷಣ ಕುರೆ ಮರಕ್ಕೆ ಹತ್ತಿದಾಂಗೆ ಹಿಂದೆನ ಸೀಟ್‌ಗೆ ಹತ್ತಿ ಕುದ್ದತ್. ಎಷ್ಟೆ ಹೇಳಿರೆನೂ ಬೈಕ್‌ನ ಹಿಂದೆ ಹಾರಿ ಹತ್ತುದೇ ಅವನ ಅಭ್ಯಾಸ. "ಎಂತದ್‌ಯಾ ನಾರಾಯಣ ಪೊಪ್ಪನ ಹಕ್ಕಲೆ ಬಟ್ಟಂಗಾಯಿಗೆ ಹೋನೆಂತ ಹೇಳ್ತಿದ್ದ. ಈಗ ನನ್ನೊಟ್ಟಿಗೆ ಹೊರ್ಟೊಳ. ಕೋಲ್ಚಾರ್‌ಗೆ ಆಗಿ ಹೋದ್ಯನೋ" ಅವ ಯಾಕೆ ಹತ್ತಿರ್ದೂಂತ ಗೊತ್ತಿದ್ದರೂ ಕುಞ್ಞಣ್ಣ ಕೇಳ್ತ್. " ಇಲ್ಲೆ ಅಣ್ಣ ನಾ ಬಡ್ಡಡ್ಕಕ್ಕೆ ಆಗಿನೇ ಹೋದು. ಬಟ್ಟಂಗಾಯಿಂದ ಬಾಕಕನ ಎರ್ಡ್ ದಿನ ಆದೆ. ಮನೆ ಸಾಮಾನ್ ಮುಗ್ದುಟು. ಹಾಂಗೆ ನಿಮ್ಮೊಟ್ಟಿಗೆ ಬಂದದ್. ಸೊಸೈಟಿ ಸಾಮಾನ್‌ಗೆ ಬಂದದೋಂತ ವಿಷಯ ಅರ್ಥ ಆದರೂನೂ ಕುಞ್ಞಣ್ಣ ಕೇಳ್ತ್. ಇಲ್ಲೆಪ್ಪ ನಿಮ್ಮಲ್ಲಿಂದಳೇ ತೆಕಣೊಕೂಂತ ಬಂದದ್‌ಂತ ಹೇಳ್ತ್. ಅಂಗಡಿ ಸೇರಿ ಅವಂಗೆ ಬೇಕಾದ ಸಾಮಾನ್ ಎಲ್ಲಾ ಕಟ್ಟ್‌ಸಿಕಂಡ ಮೇಲೆನೂ ಅಲ್ಲೇ ನಿತ್ತಿತ್ತ್. ಏನೂಂತ ಕೇಳಿಕನ ನಂಗೆ ಒಂದು ನೂರ್ ರೂಪಾಯಿನೂ ಬೇಕು. ಬಡ್ಡಡ್ಕ ಅಂಗಡಿಲಿ ಮರಗೆಳ್ಸ್ ಉಟ್ಟು, ಅದರ ತೆಕಣೊಕುಂತ ಹೇಳ್ತ್. ಬಡ್ಡಡ್ಕಲಿ ಮರಗೆಳ್ಸ್ ಇದ್ದದ್ ಹೌದು. ಆದರೆ ಅವಂಗೆ ಬೇಕಾಗಿದ್ದದ್ ಕಾಟಿ ಸರಾಯ. ಅದ್ ಗೊತ್ತಿದ್ದರೂ ಕುಞ್ಞಣ್ಣ ಏನೂ ಮಾತಾಡದೆ ನೂರ್‌ರೂಪಾಯಿನೂ ಕೊಟ್ಟತ್. ನಾರಾಯಣ ಮೋರೆಲಿ ಈಗ ಹರ್ಷ ಇತ್ತ್. ಹೊರ್ಡಿಕನ ಅವ ಹೇಳ್ತ್. ನಾಳೆ

ನಾಳ್ದ್ ಬಟ್ಟಂಗಾಯಿಲೇ ಇದ್ದನೆ. ಆದಂರ್ದ ನಾಳ್ದ್ ಬೊಳ್ಪುಗೆನೇ ಬಾವೆ. ಬಾಕನ ಮುಳ್ಳ್ ಹಂದಿ ತನ್ನೆಂತ ಹೇಳಿಕನ ಅವನ ಮೋರೆನನೇ ನೋಡ್ಡ ಕುಞ್ಞಣ್ಣಂಗೆ ಆಶ್ಚರ್ಯ ಆತ್. ಇವ ಏನ್ ಮುಳ್ಳಂದಿ ಸಾಂಕಿದವರಾಂಗೆ ಹೇಳ್ದೆ. ಅವನ ಮೋರೆನ ನೋಡಿಕನ ನಾರಾಯಣಂಗೂ ಗೊತ್ತ್ ಆತ್. ಅವ ಅದರ ವಿವರ್ಸಿತ್ ಇಲ್ಲೆಣ್ಣ ಇಂದ್ ಹೋಗಿ ಅಲ್ಲಿ ಒಂದೆರ್ಡ್ ಮುಳ್ಳ್ ಹಂದಿ ಮಾಳಕ್ಕೆ ಅಡ್ಜಿಲ್ ಹಾಕಿನೆ. ಅದ್ ನಾಳೆ ನಾಳ್ದ್ ಕಳ್ದ್ ಕತ್ತಲೆಗೆ ಮಾಳಂದ ಹೊರ್ದುದು ಸಿಕ್ಕಿಯೇ ಸಿಕ್ಕಿದೆ. ಭಾರೀ ಕರಾರುವಕ್ಕ್ ಲೆಕ್ಕ ಹೇಳ್ತ್. ಅದ್ ಅವನ ಅನುಭವ. ಅವನ ಮುಳ್ಳಹಂದಿ ಅಡ್ಜಿಲೂ ಹಾಂಗೇನೆ ಒಳ್ಳೆ ಸ್ವಾರಸ್ಯದ್ದೆ.

ಕಾಡ್‌ಲಿದ್ದ ನಾರಾಯಣನಂತವು ಮುಳ್ಳು ಹಂದಿಗೆ ಹೇಂಗೆ ಅಡ್ಜಿಲ್ ಹಾಕ್‌ವೆಂತ ಹೇಳ್ರೇ ಆಶ್ಚರ್ಯ ಆದೆ. ಮುಳ್ಳ್ ಹಂದಿಗ ಸಾಮಾನ್ಯ ಆಗಿ ಗುಂಪ್ ಗುಂಪಾಗಿ ಇರವು. ಅವು ರಾತ್ರಿ ಓಡಾಡವು. ಅವು ವಾಸ ಮಾಡ್ದು ದೊಡ್ಡಪಾರೆ ಬಂಡೆಗಳ ಅಡಿಲಿರುವ ಮಾಟೆಗಳೆಡೆಲಿ. ಅಂತ ಮಾಟೆಗೆ ಮುಳ್ಳಂದಿ ಮಾಳಾಂತ ಹೇಳ್ದು. ಅಂತ ಮಾಳಲಿ ಹಗಲಿಡೀ ಮಲ್ಗಿದ್ದ ಮುಳ್ಳಂದಿಗ ಕತ್ತಲೆ ಬಿದ್ದಾಂಗೆ ಹೊರಗೆ ಬಂದ್ ಆಹಾರ ಹುಡ್ಕಿಕಂಡ್ ಹೋಗಿ ಬೆಳ್ಗರ್‌ಗೆ ಮತ್ತೆ ಬಂದ್ ಮಾಳ ಸೇರ್ವೆ. ಹಾಂಗೆ ಮಾಳದ ಒಳಗೆ ಮುಳ್ಳಂದಿ ಇರಿಕಾಕನನೇ ಮಾಳದ ಬಾಯಿಗೆ ಅಡ್ಜಿಲ್ ಹಾಕುದು ಅವ್ಕೆ ಕರಗತ. ಬೆದ್ರ್ ತಟ್ಟೆನ ಸುಮಾರು ಮೂರ್‍ನಾಲ್ಕಡಿ ತುಂಡ್‌ಗಾಗಿ ಮಾಡಿಕಂಡ್ ಮೀನ್ ಹಿಡಿವ ಕೂಳಿನ ತರ ಮೆಡ್ದ್. ಮಾಳದ ಬಾಯಿಗೆ ಸರಿಯಾಗಿ ಅದರ ಹಿಸಿ ಅದ್ ಅತ್ತಿತ್ತ ಅಲ್ಗದಾಂಗೆ ಸುತ್ತ್ ಕಲ್ಲ್ ಎಲ್ಲಾ ಹಿಸಿ ಹಕ್ಕಲೆ ಗೂಟ ಹೊಡ್ದ್ ಗಟ್ಟಿಲಿ ಬೊಳ್ಳಿಂದ ಕಟ್ಟಿ ಹಿಸಿ ಹೋದರೆ ಆತ್ ಮುಳ್ಳಂದಿ ಸಿಕ್ಕಿತ್‌ಂತಳೇ ಲೆಕ್ಕ. ಮೆಡ್ದ ಆ ಕೂಳಿ ಹೇಂಗೆ ಇದ್ದದೆಂತ ಹೇಳ್ರೆ ಒಂದ್ ಕಡೆ ಬಾಯಿ ಅಗಲ ಇದ್ದ್ ಇನ್ನೊಂದ್‌ಕಡೆ ಸಪೂರ ಇದ್ದದೆ. ತಟ್ಟೆಗಳ ಸೆರೆಲಿ ಸುಮಾರ್ ಒಂದ್ ಬೆರ್ಳ್‌ನ ಅಗಲ ಸೆರೆ ಇದ್ದದೆ. ಅದರೊಳಗೆ ದಾಟಿ ಹೋಕ್‌ಂತ ಮುಳ್ಳಂದಿಗೆ ಕಂಡ್ ಒಳಗೆ ನುಗ್ಗಿ ದಾಟಿಕೆ ಹೋಕನ ಅದ್ ಇನ್ನೊಂದ್ ಪುಡೆಲಿ ಹೊರ್ಡಿಕೆ ಆದುಲೆ. ಯಾಕೆಂತ ಹೇಳ್ರೆ ಆ ಗಂಡಿ ಅದ್ ತುಂಬಾ ಸಣ್ಣದಾಗಿದ್ದದೆ. ಅದರ್ಲಿ ಹೊರ್ಡಿಕೆ ಆದುಲೆಂತ ಗೊತ್ತಾಕನ ಅದ್ ಬಂದ ಹಾಂಗೇ ಹಿಂದೆ ಹೋಕೆ ಪ್ರಯತ್ನ ಮಾಡ್ದೆ. ಆಗ ಗೊತ್ತಾದೆ ಹಿಂದೆನೂ ಹೋಕೆ ಆದುಲೇಂತ. ಯಾಕೇಂತ ಹೇಳ್ರೆ ಅಷ್ಟೊತ್ತಿಗೆ ಆ ಅಡ್ಜಿಲ್ ಸುತ್ತ್ ಇದ್ದ ಸೆರೆಗಳಲಿ ಮುಳ್ಳ್ ಹಂದಿನ ಮುಳ್ಳ್ ಅದಂರ್ದ ಹೊರಗೆ ಬಂದಿದ್ದದೆ. ಅಡ್ಜಿಲ್‌ಗೆ ಸುತ್ತ್ ಹೆಣ್ದಿ ಬೊಳ್ಳಿಗಳ ನಡುಲಿ ಸಿಕ್ಕ ಹಾಕಂಡ ಮುಳ್ಳ್‌ಗಳೇ ಅದರ ಹಿಂದೆ ಬರದಾಂಗೆ ಒಂದು ರೀತಿನ ಇಂಟರ್ ಲಾಕ್‌ನ ಹಾಂಗೆ ಮಾಡಿದ್ದದೆ. ಯಾವುದೇ ರೀತಿಲಿನೂ

ಅದ್ ತಪ್ಪಿಸಿಕಂಬಕೆ ಆದುಲೆ. ಅಲ್ಲಿಗೆ ಅದರ ಕತೆ ಮುಕ್ತ್. ಇನ್ನ್ ಅದ್ ಇಂತದೇ ದಿನ ಅದ್ಕೆ ಸಿಕ್ಕುದೂಂತ ಹೇಳ್ದು ನಾರಾಯಣನಂತರವ ಅನುಭವದ ಮಾತ್. ನಾರಾಯಣಂತವರ ಲೆಕ್ಕಲಿ ಮುಳ್ಳ್ ಹಂದಿ ತುಂಬಾ ಸೂಕ್ಷ್ಮ ಇರುವ ಪ್ರಾಣಿಗ. ಅವು ನಡ್ದಾಡುವ ಜಾಗೆಲಿ ಒಂದ್ ಸಣ್ಣ ಹೆಚ್ಚ್ ಕಡಿಮೆ ಕಂಡರೂ ದಾರಿ ಬದ್ಲಾಯ್ಸಿವೆ. ಅತ್ತ ಬಾದೇ ಇಲ್ಲೆ. ಇತ್ತ ಅವರ ಮಾಳದ ಒಳಗೆ ಹೊರಗೆ ಹೊರ್ಡಿಕೆ ಇರ್ದು ಸಾಮಾನ್ಯವಾಗಿ ಒಂದೇ ಕಂಡಿ. ಒಮ್ಮೆ ಬೆಳ್ಗರಿಗೆ ಒಳಗೆ ಹೊಕ್ಕರೆ ಅದ್ ಮತ್ತೆ ಹೊರ್ಡುದು ಕತ್ತಲೆಗೆನೇ. ಮುಳ್ಳಂದಿ ಮಾಳದ ಒಳಗೆ ಉಟ್ಟೂಂತ ಹೋಗಿ ಬಂದ ದಾರಿಂದ ಗೊತ್ತಾದರೆ ಈ ರೀತಿ ಮಾಳದ ಬಾಯಿಲಿ ಅಡ್ಜಿಲ್ ಹಾಕುವ ಸದ್ದ್ ಒಳಗೆ ಕೇಳಿಯೇ ಕೇಳ್ಟ್. ಆದರೂ ಅವು ಹೊರಗೆ ಹೊರ್ಡುದುಲೆ. ಎದ್‌ರ್ಲಿ ಅಪಾಯ ಉಟ್ಟೂಂತ ಅವ್ಕೆ ಗೊತ್ತಾಗಿದ್ದದೆ. ಅಷ್ಟಾದ ಮೇಲೆ ಅವು ಆ ಸದ್ದ್ ನಿತ್ತರೂ ಅಂದ್‌ನ ರಾತ್ರಿ ಅಲ್ಲಿಂದ ಹೊರ್ಡುದುಲೆ. ಹೊಟ್ಟೆಗೆ ಏನಿಲ್ಲದಿದ್ದರೂ ಹಾಂಗೇ ಇದ್ದವೆ. ನಿಜಕ್ಕೂ ಅದ್ ಒಂದ್ ವಿಪರ್ಯಾಸ. ಒಂದ್ ಕ್ರೂರ ಪದ್ಧತಿ. ಆದರೆ "ದಂಡ್‌ಲಿ ಸೋದರಮಾವನೂ ಇಲ್ಲೆ". ಇದೊಂದ್ ಗಾದೆ ಹಾಂಗೆನೇ ಬೇಟೆಲಿ ಫಲನ ಮಾತ್ರ ಗುರಿ ಆಗಿ ಹಿಸಿಕಂಬೊದು. ಹಾಂಗೇ ಆದೆ. ಒಳಗಿದ್ದ ಮುಳ್ಳ್ ಹಂದಿಗ ಹೊರೆಗಿನ ಶಬ್ದ ಕೇಳ್ದ ಮೇಲೆ ಹೊರಗೆ ಹೊರ್ಡಿಕೇ ಹೆದ್ರಿವೆ. ಹಾಂಗೇ ಎಷ್ಟ್ ದಿನ ಇರಕ್. ಒಂದ್ ದಿನ, ಎರ್ಡ್ ದಿನ, ಹೊಟ್ಟೆಗೆ ಏನೂ ಇಲ್ಲದಿರಿಕಾನ ಹೊರಗೆ ಬಾವ ಧೈರ್ಯ ಮಾಡಿವೆ. ಅವರ ಕಣ್ಣಿಗೆ ಎಂತದೂ ಅಡ್ಡಿ ಕಾಂಬೊದುಲೆ. ಕೆಲವು ಸಣ್ಣ ಸಣ್ಣ ಏರ್‌ಪೇರ್‌ಗ ಕಂಡರೂ ಅದೆಲ್ಲದಂರ್ದ ಹೊಟ್ಟೆ ಹೆಚ್ಚ್. ಹೊರಗೆ ಬಂದೇ ಬರೋಕಾದೆ. ಮೊನ್ನರ ಕಪಟಗ ಯಾವುದೂ ಗೊತ್ತಿರ್ದುಲೆ. ಎದ್ರ್ ಕಾಂಬ ಗಂಡಿ, ಅವರ ವಾಸದ ಜಾಗನ ಹೊರಗೆ ಮಾಮೂಲ್‌ನಾಂಗೇ ದಾರಿ ಕಂಡ್‌ಕಂಡೇ ಇದ್ದದೆ ಮತ್ತೆ ಚಿಂತೆ ಮಾಡ್ದುಲೆ ಒಮ್ಮೆನೇ ಹೊರಗೆ ಹೊರ್ಟದೆ. ಅಲ್ಲಿಗೆ ಮುಗ್ತ್. ಅದರೊಟ್ಟಿಗೆ ಬೀಲದಾಂಗೆ ಯಾವುದಾದರೂ ನುಗ್ಗಿರೆ ಅದೂನು. ಅಂತದ್ ಅಪರೂಪನೆ. ಹಾಂಗಿದ್ದರೂ ಎರ್ಡ್ ಸಿಕ್ಕುದೂ ಉಟ್ಟ್. ಇದ್ ನಾರಾಯಣನ ಅಡ್ಜಿಲ್. ಅದೇ ಧೈರ್ಯಲಿ ಅವ ಹೇಳ್ದ್. ನಾ ಬಾಕನ ಮುಳ್ಳ್ ಹಂದಿನ ತೆಕಂಡೇ ಬನ್ನೇಂತ. ಎಂತಾ ಕಾಡ್ ಜೀವಿ. ಅವಂದ್ ಇದ್ ಒಂದೇ ಅಲ್ಲ. ಇಂತದ್ ನೂರಾರ್ ಉಟ್ಟು. ಅಲ್ಲಲ್ಲಿ, ಹೇಂಗೆ ಬೇಕಾದೆ ಹಾಂಗೆ ಅದರ, ಸಮಯದ, ಎಲ್ಲಾ ವ್ಯವಸ್ಥೆಗಳಿಗೂ ಒಳಪಟ್ಟ ಹಾಂಗೆ, ಹಾಂಗೇನೇ ಅಡ್ಜಿಲ್ ಹಾಕುದೋ, ಸಿಡಿ ಹಾಕುದೋ, ಬಿಲ್ಲ್ ಕಟ್ಟುದೋ, ಬೆಡಿ ಕಟ್ಟುದೋ... ಅದರ್ಲೂ ಯಾವ ಪ್ರಾಣಿಗೆ ಹೇಂಗೆ ಬೆಡಿ ಕಟ್ಟೊಕು. ಎಷ್ಟ್ ಎತ್ತರಕ್ಕೆ ಸೂತ್ರ ಬಳ್ಳಿನ ಬುಟ್ಟರೆ, ಎಷ್ಟ್ ದೂರಲಿ ಸೂತ್ರ ಬಳ್ಳಿ ಎಳ್ದ್ ಹೋದರೆ

ಎಲ್ಲಿಗೆ ಪೆಟ್ಟ್ ಬೀಳ್ದು. ಕೆಳಗೆಂದ ಮೇಲೆ ಹತ್ತಿಕಾನ ಹೇಂಗಿರೋಕು. ಮೇಲೆಂದ ಕೆಳಗೆ ದಾಟಿಕನ ಎಷ್ಟಿರೊಕು. ಇದೆಲ್ಲಾ ನಾರಾಯಣನ ಜೀವನಲಿ ಹಾಸ್ ಹೊಕ್ಕಾಗಿದ್ದ ಅಂಶಗ. ಎಲ್ಲದಕ್ಕೂ, ಎಲ್ಲದರ್ಲಿನೂ ಒಮ್ಮೊಮ್ಮೆ ಆಗು ಹೋಗುದರೊಳಗೆ ವ್ಯತಿರಿಕ್ತನೂ ಇದ್ದದೆ. ಅದ್ ಅಂಥಾ, ಕಾಡ್ ಕಾಡ್‌ನನೇ ಕಂಡ ಬೆಡಿ ನಾರಾಯಣನ ಜೀವನಲಿ ನಡ್ದ ಹೋಗಿತ್ತ್.

******

ಕುಞ್ಞಣ್ಣನ ಕಾಂಬಕಾಕನ ಪ್ರತೀ ಸರ್ತಿನೂ ಒಂದು ವಾತ್‌ನ ಬೆಡಿನಾರಾಯಣ ಕೇಳಿಕಂಡೇ ಇರ್ತಿತ್ತ್. ಬಟ್ಟಂಗಾಯಿಲಿ, ಚೋನಪ್ಪಾಡಿಲಿ ಹುಲಿಗ ಒಳೊ. ಅಣ್ಣ ನಾ ಹೊಡ್ಯೊಕೋ..? ಇದ್ಕೆ ಕುಞ್ಞಣ್ಣನ ಹಕ್ಕಲೆ ಉತ್ತರ ಇತ್ಲೆ. ಹೊಡೀಂತ ಹೇಳ್ರೆ ಅಣ್ಣ ಹೇಳಿ ಹೊಡ್ದದ್‌ಂತ ಹೇಳ್ದು. ಹೊಡಿಬಡಾಂತ ಹೇಳ್ರೆ ಅದರ ಅವ ಕೇಳಿಕಿಲೆ. ಇದೆಲ್ಲದ ನಡುಲಿನೂ ಒಂದ್ ಸಂದಿಗ್ಧತೆ ಇತ್ತ್. ಹೇಳಿಕೇಳಿ ಕುಞ್ಞಣ್ಣ ರಾಮಯ್ಯಜ್ಜ, ಹುಲಿ ಅಪ್ಪಯ್ಯಜ್ಜನ ಪಿಳ್ಳಿ, ಅಪ್ಪ ಬಾಬಣ್ಣ ಹೊಡ್ದ ಮೃಗಗಳಿಗೆ ಲೆಕ್ಕನೇ ಇತ್ಲೆ. ಆದರೂ ಹೊಡಿಂತ ಕುಞ್ಞಣ್ಣ ಹೇಳ್ತ್‌ಲೆ. ಆದರೆನೂ ಅವಂಗೆ ಕುತೂಹಲ ಒಂದ್ ಇದ್ದೇ ಇತ್ತ್. ಇಲ್ಲೆಲ್ಲ ಹುಲಿಗಂತ ಹೇಳ್ರೆ ಇತ್ತ ಚಿರತೆಂದ ಹಿಡ್ದ್ ಅತ್ತ ಪಟ್ಟೆ ಹುಲಿನ ವರೆಗೂ ಒಂದೇ ಹೇಳ್ದು ಹುಲಿಗಾಂತ ಮಾತ್ರ. ಅದರ್ಲಿನೂ ಇಲ್ಲಿ ತುಂಬಾ ಬೇರೆ ಬೇರೆ ಬದಲಾವಣೆಗಳ ಕಂಡ್ ಕಂಡ್ ಹಳ್ಳಿಲಿ ಅವರೆಲ್ಲಾ ಬೇರೆ ಬೇರೆ ಹೆಸರ್ಲಿ ಕರ್ಯತಿದ್ದೊ. ಚಿರತೆಗಳಲ್ಲಿ ಕರಿಪುಲ್ಲಿ, ಬೇಂಗಪುಲ್ಲಿಂತ ಹೇಳ್ವ ರೀತಿ ಇದ್ದರೆ ಪಟ್ಟೆ ಹುಲಿಲಿ, ಅಡ್ಡ ಬಲಿಪ, ನೀಟ ಬಲಿಪಾಂತ ಹೇಳ್ತಿದ್ದೊ. ಸೃಷ್ಟಿ ವೈಚಿತ್ರ್ಯಗ ಏನಿದ್ದೊನೋ ಏನೋ. ಕೆಲವೊಂದ್ ಸಾಧ್ಯತೆಗಳಲ್ಲಿ ಅವರ ಬಣ್ಣ, ಮೈನ ಮೇಲಿರುವ ಗೆರೆಗಳ ಸಾಮಾನ್ಯ ಸ್ಥಿತಿಗೆ ಸ್ವಲ್ಪ ಏರ್ ಪೇರ್‌ಗಳೂ ಇರ್ತಿತ್ತ್. ಮೊನ್ಸರ್ಲಿ ಕರಿಯ, ಕೆಂಚ, ಬಿಳಿಯ, ಸರಳಿ ಕಣ್ಣ್‌ನವ, ಕೋಸ್‌ಕಣ್ಣ್‌ನವಾಂತ ವಿಂಗಡಣೆ ಮಾಡ್ದಾಂಗೆ ಪ್ರಾಣಿಗಳನೂ ಮಾಡ್ತಿದ್ದೋ... ಹಾಂಗೆ ಕುಞ್ಞಣ್ಣ ಅವನ ಹಕ್ಕಲೆ ಕೇಳ್ತ್. "ಅದ್ ಯಾವ ತರದ ಹುಲಿಯಾ? ಬೇಂಗಪುಲ್ಲಿನೋ ಅಡ್ಡಬಲಿಪನೋ...? ಅದ್ಕೆ ಸೀದಾ ಉತ್ತರ ಅವನ ಹಕ್ಕಲೆ ಇತ್ತ್‌ಲೆ. ಇಲ್ಲೆ ಅಣ್ಣ ಅದ್ ದೊಡ್ಡ ಹುಲಿನೇ... ಬೆಡಿ ಹೇಳ್ತ್. ಕುಞಣ್ಣಂಗೆ ಒಂದೂ ಸರೀಂತ ಕಂಡತ್ಲೆ. ಎಂತದ್ ಹೇಳ್ದೆನೋ... ಏನೊ....ಂತ ಹೇಳಿ, ಕೆನ್ನಾಯಿ ಅಲ್ಲಲ್ಲ..? ನಾರಾಯಣಂಗೆ ಒಮ್ಮೆನೇ ಕೋಪ ಬಾತ್. "ಎಂತದ್ ನೀವು ಹೇಳ್ದು ಕೆನ್ನಾಯೀಂತನೋ... ನಿವ್‌ಗೇ ಗೊತ್ತಾದೆ. ನಾ ಅದರ ಹೊಡ್ದ್

ತಂದ್ ನಿಮ್ಮ ಹಕ್ಕಲೆ ಹಿಸಿನೆ". ಒಂದ್ ರೀತಿಲಿ ಭೀಷ್ಮ ಪ್ರತಿಜ್ಞೆನ ರೀತಿಲೇ ಮೋರೆ ಕಪ್ಪು ಮಾಡಿ ಪ್ರತಿಜ್ಞೆ ಮಾಡಿ ನಾರಾಯಣ ಹೊರ್ಟತ್. ಕುಞ್ಞಣ್ಣಂಗೆ ಅದೊಂದು ಹಾರಿಕೆನ ಹಾಸ್ಯದ ಪ್ರಶ್ನೆ ಆಗಿತ್. ನಾರಾಯಣಂಗೆ ಅದೊಂದ್ ಸವಾಲಾಗಿತ್ತ್.

ಆಲೆಟ್ಟಿ ಗ್ರಾಮಂದ ಸುಮಾರ್ ಪಶ್ಚಿಮದ ಕಡೆಗೆ ಇರ್‍ದು ಮಂಡೆಕೋಲು ಗ್ರಾಮ. ಅತ್ತ ದಾಟಿರೆ ಸಿಕ್ಕುದು ನಮ್ಮ ರಾಜ್ಯದಾಚೆನ ಕೇರಳದ ಅಡೂರ್. ಆಚೆಗೆ ಕಾಡ್ ವಿರಳ ಆಗ್ತಾ ಹೋದೆ. ಮಂಡೆಕೋಲ್‌ನ ಮೇಲೆನ ದೇಶಮಲೆಂತ ಹೇಳ್ರೆ, ಕೊಡಗ್‌ನ ಭಾಗಮಂಡಲ, ಪಟ್ಟಿ, ಇತ್ತಿತ್ತ ಬಂದಾಂಗೆ ತೋರಿಮಲೆ, ಕುದ್ರೆಪಾಯ, ತೊಡಿಕಾನ, ಕಮ್ಮಾಡಿ, ಕಲ್ಲಪಳ್ಳಿ, ಬಟ್ಟಂಗಾಯ, ಚೋನಪ್ಪಾಡಿ, ಕೊಚ್ಚಿ, ಕಣ್ಣೂರು, ದಾಟಿ ಆಚೆಗೆ ಇರ್‍ದು ದೇಶಮಲೆ ಅದೇ ಕೊಡಿ. ಸುಳ್ಯಂದ ಆಚೆನ ಪೂಮಲೆ, ಬೇಂಗಮಲೆ, ಬಂಟಮಲೆ, ಅದ್ಕೇ ಸಮಾನಾಂತರಲಿ ಈಚೆ ಪುಡೆ ಇರ್‍ದೇ ಈ ಕಾಡ್‌ಗ. ಎಷ್ಟ್ ಸ್ವಚ್ಛ, ನಿರ್ಮಲ, ನಿಭಿಡ ಕಾಡ್‌ಂತ ಹೇಳ್ರೆ ಇದ್ ಇಂದಿಗೂ ಸ್ವಲ್ಪ ಆದರೂ ಜೀವಂತ ಆಗಿ ಇರ್‍ದ್ಕೆ ಎಲ್ಲನೂ ಸರಿಆಗಿ ಉಟ್ಟು. ಇಂತ ಕಾಡ್‌ನ ನಡುಲಿ ಇರುವ ಬಟ್ಟಂಗಾಯಿ ಕಾಡ್ ಮತ್ತೆ ಚೋನಪ್ಪಾಡಿ ನಿಜಕ್ಕೂ ಒಂದ್ ನಿಗೂಢ, ಸಸ್ಯ, ಪ್ರಾಣಿ, ಖನಿಜ ಸಂಪತ್ತ್‌ನ ಬೀಡ್. ಬಟ್ಟಂಗಾಯಲಿ ಬಾಳ ಹಿಂದೆನೇ ಬ್ರಿಟಿಷ್ ಕಾಲಲಿ ಸುಮಾರ್ ಕಾಡ್ ಪ್ರದೇಶನ ಯಾವುದೋ, ಹೇಂಗೆನೋ ಗೊತ್ತಿಲೆ ಅದರ ಲೀಸ್‌ಗೆ ತೆಕಂಡ್ ನಡ್ಸವರ ಒಂದ್ ದೊಡ್ಡ ಅಡ್ಕೆ ತೋಟ ಇತ್ತ್. ಅಷ್ಟ್ ದೊಡ್ಡ ತೋಟ ಬಂದಾಕನ ಅದ್ಕೆ ಬೇಕಾದ ಕೆಲ್ಸದವೂನೂ ಒಟ್ಟಿಗೆ ಒಕ್ಕಲ್‌ಗೆ ಆಗಿ ಅಲ್ಲಿಗೆ ಬಂದ್ ಸೇರ್‍ದೊ. ದೂರದ ಮುಳ್ಳೇರಿಯ, ವಾಲಸಿರಿ, ಪೆರ್‍ದೋಡಿ ಕಡೆಲಿ ಇದ್ದ ಗಿರಿಜನ ಕುಟುಂಬಗ ಬಟ್ಟಂಗಾಯಲಿ ಬಂದ್ ನೆಲೆ ನಿತ್ತೊ. ಆದರೆ ನಾರಾಯಣನ ಹಿರಿಯರ್ ಅಲ್ಲಿ ಮುಂದೆನೇ ಇದ್ದೊ. ಅವು ಅಲ್ಲಿನ ಮೂಲ ನಿವಾಸಿಗ. ಅವುನೂ ಗಿರಿಜನಂಗಳೇ, ಅಂದರೆ ಜಾತಿಲಿ ಗಿರಿಜನಂಗಂತ. ನೀತಿಲಿ, ನಡವಳಿಕೆಗೆ ಅವು ನಿಜವಾದ ಹೆಮ್ಮೆಪಡುವ ಗಿರಿಜನಂಗ. ಬಟ್ಟಂಗಾಯಿಗೆ ಹೋಲಿಕೆ ಮಾಡ್ರೆ ನಾರಾಯಣಂಗೆ ಬಡ್ಡಡ್ಕ ಪೇಟೆನಾಂಗೇ ಕಂಡದೆ. ಅವಂಗೆ ಬಡ್ಡಡ್ಕ ಅಷ್ಟ್ ಸರಿ ಆಕ್ತಿತ್ಲೆ. ಹಾಂಗಾಗಿ ಹೆಣ್ಣ್ ಮಕ್ಕ ಎಲ್ಲವೂ ಇಲ್ಲಿ ಇದ್ದರೂ ವಾರಲಿ ಒಂದೆರಡ್ ದಿನ ಅವ ಬಟ್ಟಂಗಾಯಿಲೇ ಕಳಿದು. ಹೆಸರಿಗೆ ಮನೆ, ಅವನ ಸಮಯ ಕಳಿದು ಮಾತ್ರ ಕಾಡ್‌ಲೇ. ಮನೆ ಅಂಗಳಂದ ಒಂದ್ ಹೆಜ್ಜೆ ಮೇಲೆ ಹಿಸಿರೆ ಅದ್ ಬಟ್ಟಂಗಾಯಿ ಕಾಡೇ. ಅವನ ಮನೆ ಕಾಡ್ ಎರ್‍ಡೂ ಒಂದೆ. ಮನೆ ಹಕ್ಕಲೆ ಕಾಡೋ.... ಕಾಡೊಳಗೆ ಮನೆನೋ... ಹಾಂಗೆನೆ. ಮನೆಲಿ ಮಲ್ಗುದುನೂ ಕಾಡ್‌ನ ಅಟ್ಟಳಿಗೆಲಿ ಕುದ್ದಾಂಗೆನೆ.

ತುಂಬಾ ದಿನಂದ ಹುಲಿ ಹೆಜ್ಜೆ, ಕೇರಿಬೊಡ್ದ ಜಾಗೆ, ಮರದ ಮೇಲೆ ಎಳ್ದ್ ಪರ್ಚಿದ ಉಗ್ರ್ ಗುರ್ತ್ ಎಲ್ಲನೂ ಕಂಡ ನಾರಾಯಣಂಗೆ ಒಂದ್ ಹುಲಿ ಹೊಡ್ಯೊಕೊಂತ ಮನ್ಸಗೆ ಬಂದಿತ್ತ್. ಇಲ್ಲೆ ಹೊಡ್ದೇ ಹೊಡ್ಯೊಕುಂತ ಮನ್ಸ್‌ಲೇ ತೀರ್ಮಾನ ಮಾಡಿತ್ತ್. ಲೈಟ್ ಕಟ್ಟಿ ಕಾಡ್‌ಲಿ ನಡ್ಯಕನ ಒಂದೆರ್ಡ್ ಸರ್ತಿ ಕಿಚ್ಚಿನಂತಾ ಆ ಕಣ್ಣ್‌ಗಳ ಕಂಡೂ ಇತ್ತ್. ಆದರೆ ಹೊಡ್ಯಕೆ ಧೈರ್ಯ ಬಂದಿತ್ಲೆ. ಧೈರ್ಯ ಇತ್ಲೆಂತ ಹೇಳ್ರೆ ಅವಂಗೆ ಕಡಿಮೆ ಇದ್ದದ್ ಹುಲಿ ಹೊಡಿವ ಧೈರ್ಯ ಅಲ್ಲ. ಅದ್ ಇದ್ದೇ ಇತ್ತ್. ಅವನ ಹಕ್ಕಲೆ ಕಡಿಮೆ ಇದ್ದ ಧೈರ್ಯ ಎಂತದ್‌ಂತ ಹೇಳ್ರೆ ಹೊಡ್ದ ಮೇಲೆ ಏನ್ ಆದೋಂತ. ಎಲ್ಲಿಯಾರ್ ಎಲ್ಲವುಕೆ ಗೊತ್ತಾಗಿ ಮತ್ತೆ ಜೈಲ್‌ಲಿ ಕುದ್ರಿಕೆ ಆದರೇಂತ ಮಾತ್ರ ಅವಂಗೆ ಇದ್ದ ಹೆದ್ರಿಕೆ. ಎಷ್ಟೇ ಕಾಡಲಿ ಹುಟ್ಟಿ ಕಾಡ್‌ಲಿ ಬೆಳ್ದರೂನು ಇಂತ ಕೆಲವು ಕಾನೂನ್‌ಗ ಅವಂಗೂ ಗೊತ್ತಿತ್ತ್. ಹೆದ್ರಿಕೆನೂ ಇತ್ತ್. ಅದಲ್ಲದಿದ್ದರೆ ಅಂವ ಅದಂರ್ದ ಮುಂದೆನೇ ಹುಲಿನ ಮಾತ್ರ ಅಲ್ಲ ಹುಲಿಗಳನ್ನೂ ಹೊಡ್ದಿತ್ತೋ ಏನೋ? ಒಟ್ಟಾರೆ ಒಂದ್ ನಾಲ್ಕೈದ್ ಸರ್ತಿ ಹುಲಿ ಕಾಂಬಕೆ ಸಿಕ್ಕರೆನೂ ಅವ ಹೊಡಿವ ಸಾಹಸ ಮಾಡ್ತ್‌ಲೆ. ಆಲೆಟ್ಟಿಲಿ ಕುಞ್ಞಣ್ಣನ ಎದ್‌ರ್ಲ್ ದರ್ಬಾರ್ ಮಾತಾಡ್ರೂ ಅವ ಮಾತ್‌ಗೆ ಅದರ ಹೇಳ್ತೇ ಹೊರ್ತು ಬೇರೆ ಎಂತದಕ್ಕೂ ಅಲ್ಲ.

****

ಆಲೆಟ್ಟಿಂದ ಹೊರ್ಟ್ ಬಂದ ನಾರಾಯಣ ಬಡ್ಡಡ್ಕಲಿ ಅವನ ಮನೆಗೆ ಹೋಗಿ ಎಂತದೋ ಇದ್ದದರ ತಿಂದ್ ಕೈಲಿ ಒಂದ್ ಕತ್ತಿ ತೆಕಂಡ್ ಮನೆ ಹಿಂದೆ ಗುಡ್ಡೆ ಹತ್ತಿ ಸೀದಾ ಬಟ್ಟಂಗಾಯಿ ಕಡೆಗೆ ನಡ್ತ್. ಬಡ್ಡಡ್ಕಂದ ಬಟ್ಟಂಗಾಯಿ ಅವನ ಮನೆಗೆ ಸುಮಾರ್ ಏಳ್ ಕಿ. ಮೀ. ದಾರಿ ಅದು. ಆನೆಕಳ್ಳುನೊರಗೆ ದಾರಿ ಸುಮಾರಾಗಿ ಸಾಗಿರೆನು ಮುಂದೆ ಸೀದಾ ಹತ್ತಿಕೇ ಇರ್ದು. ಬೋಳ್‌ಮಾನಿ ದಾಟಿ ಕೂವೆಕೊಚ್ಚಿ ಕರೆಲೆ ನಡ್ಟ್ ಜರ್ದಮಾನಿ ಕರೆನ ತಟ್ಟ್ ಜಾಗೆಲಿ ಹುಲಿ ಕೇರಿಬೊಡ್ದದ್ ಕಂಡತ್. ಅದುನೂ ಕಳ್ದ ರಾತ್ರಿದ್. ಈಗ ಸದ್ಯಕ್ಕೆ ಅವನ ಗಮನ ಇದ್ದದ್ ಮನೆಗೆ ಮುಟ್ಟಿಕೆ ಮುಂದೆನೇ ಮುಳ್ಳಂದಿ ಮಾಳಕ್ಕೆ ಅಡ್ಚಿಲ್ ಹಾಕಿಯೇ ಹೋಕುಂತ. ಆ ಕಾಡ್‌ಲಿ ಎಲ್ಲೆಲ್ಲಿ ಮಾಳಗ ಒಳೋ. ಯಾವುದರ್ಲಿ ಹಂದಿಗ ಸೇರ್ವೆ ಎಲ್ಲನೂ ಗೊತ್ತಿತ್ತ್. ಜರ್ದಮಾನಿ ಕರೆಲಿ ಇರುವ ಮತ್ತೆ ಕೆಳಗೆ ಬಟ್ಟಂಗಾಯಿಗೆ ಇಳಿವ ದಾರಿನ ಕರೆನ ಮಾಳಗಳಿಗೆ ಅಡ್ಚಿಲ್ ಮಾಡಿ ಹಿಸಿನೇ ಮನೆ ಸೇರ್ದೊಂತ ತೀರ್ಮಾನ ಮಾಡಿನೇ ಹೊರ್ಟವ. ಜರ್ದಮಾನಿ ದಾಟಿದಾಂಗೆ ಸಿಕ್ಕುವ ದೊಡ್ಡ ಬೆಳಂರ್ದ ಮರದ ಹಕ್ಕಲೇ ಅಲ್ಲೇ ಕೆಳಗೆ ಇದ್ದ ಬೆದ್ರ್‌ನ ಒಂದರ ಕಡ್ಟ್ ತಾತ್.

ಬೆದ್ರ್ ಕಡ್ದ್ ತಂದದ್‌ಂತ ಹೇಳ್ರೆ ಹಿಂಡ್ಲ್‌ಂದ ಕಡ್ದ್ ತಂದದ್ ಅಲ್ಲ. ಇಂತ ಸಮಯಕ್ಕೆ ಬೇಕಾದೇಂತ ಯಾಗಳೋ ಕಡ್ದ್ ಹಾಕಿದ ಬೆದ್ರ್ ಅದ್. ಅದರ ತಂದ್ ನೆರ್ಳ್‌ಲಿ ಕುದ್ದ್ ಬೇಕಾದಷ್ಟೆ ಅಳತೆಗೆ ತುಂಡ್ ಮಾಡಿ ಅಲ್ಲೇ ಕರೆಲಿ ಇದ್ದ ಕಾಡ್ ಬೊಳ್ಳಿಗಳ ತಂದ್ ಅದರ ಮೆಡ್ಯಿಕೆ ಸುರುಮಾಡ್ತ್. ಮುಳ್ಳಂದಿ ಮಾಳದ ಬಾಯಿನ ಅಳತೆ ಮುಳ್ಳಂದಿಂದ ಜಾಸ್ತಿ ಅವಂಗೇ ಗೊತ್ತಿತ್ತ್.

ಎಷ್ಟೇ ಬೇಗ ಮೆಡ್ದರುನೂ ಹೊತ್ತ್ ತುಂಬಾ ಆಗಿತ್ತ್. ಮೆಡ್ಜೆಲ್ ಆದ ಕೂಡ್ಲೆ ಸೀದಾ ಜರ್ದಮಾನಿನ ಕರೆಲಿದ್ದ ಮಾಳದಬಾಯಿಗೆ ಅದರ ಕಟ್ಟಿ ಅದ್ ಮೊಸ್ಗದ ಹಾಂಗೆ ಮಾಡಿ ಆಕನ ನಾಳೆಗೆನೋ ನಾಳ್ದಗೆನೋ ಒಂದ್ ಹಂದಿ ಗೇರೆಂಟಿಂತ ಆತ್. ಮಾಳದ ಒಳಗೆ ಹಂದಿಗ ಇದ್ದದ್ ಅವಂಗೆ ಗೊತ್ತಾಗಿತ್ತ್. ಅಲ್ಲಿನ ಕೆಲ್ಸ ಮುಗ್ದ ಮೇಲೆ ಅಂತಾ ಅವಸರ ಅವಂಗೆ ಕಂಡತ್ಲೆ. ಯಾಕೇಂತೇಳ್ರೆ ಇನ್ನೊಂದು ಮಾಳ ಇರ್ದು ಅವನ ಮನೇ ಹಕ್ಕಲೆನೇ. ಒಂದು ವೇಳೆ ಕತ್ತಲೆನೇ ಆದರೂ ಒಂದು ಕೂಕಳ್ ಹಾಕಿರೆ ಅಲ್ಲಿಂದ ತಮ್ಮ ಲೈಟ್ ತೆಕಂಡ್ ಬಾದು. ಆದರೆ ಹಾಂಗೆ ಆತ್ಲೆ. ಅಲ್ಲಿನೂ ಅಡ್ಜಿಲ್ ಹಾಕಿ ಮನೆ ಮುಟ್ಟಿಕಾಕನ ಇನ್ನೂ ಕತ್ತಲೆ ಆಗಿತ್ಲೆ. ಬೊಳ್ಪಂದ ನಡ್ದ್ ನಡ್ದ್ ಬೊಚ್ಚಿ ಹೋಗಿತ್ತ್. ಅವ್ವ ತಂದುಕೊಟ್ಟ ಚಾಯ ನೀರ್ ಕುಡ್ದವ ಅರ್ದ ಮೊಲ್ಗಿದ ಅರ್ದ ಕುದ್ದಾಂಗೆ ಅಲ್ಲೇ ತಿಣೆಲಿ ಅಡ್ಡ ಆತ್. ಹಾಂಗೆ ಕುದ್ದವಂಗೆ ಇಂದ್ ಕಾಡ್‌ಗೆ ಬೆಡಿತೆಕಂಡ್ ಹೋದೋ ಬೇಡನೋಂತ ನೆನ್ನಿಕಂಡತ್. ಬೇಡ ಇಂದ್ ಹೋದುಲೆ, ಈಗಳೇ ಬೊಚ್ಚಿಟ್ಟುಂತ ಕಂಡದೆ. ಬೇಡಾಂತಳೇ ತೀರ್ಮಾನ ಮಾಡ್ದವಂಗೆ ಒಮ್ಮೆ ಕೆಳಗೆ ಬಟ್ಟಂಗಾಯಿಗೆ ಹೋಗಿ ಬರೊಮೋಂತ ಕಂಡತ್. ಅಲ್ಲೇ ಸುಮಾರ್ ಒಂದ್ ಕಿ. ಮೀ. ನಡ್ದರೆ ಆತ್. ಕೆಳಗೆ ಬಟ್ಟಂಗಾಯಿಲಿನೂ ಕೆಲವು ಮನೆಗ ಇದ್ದೊ. ಅದರ್ಲಿ ಲಿಂಗಪ್ಪನೊಟ್ಟಿಗೆ ಅವಂಗೆ ಒಳ್ಳೆದ್. ಅವಂಗೂ ಹಾಂಗೇನೇ. ಅಲ್ಲಿ ಲಿಂಗಪ್ಪನಲ್ಲಿ ಬೀಜದ ಸರಾಯ ಇರ್ದೂಂತಳೂ ಗೊತ್ತಿತ್. ಅಲ್ಲಿಗೆ ಹೋದವ ಅವಂಗೆ ಬೇಕಾದರ ತೆಕಂಡ್ ಮನೆ ಮುಟ್ಟುವ ಹೊತ್ತ್‌ಗೆ ಗಂಟೆ ಒಂಬತ್ತೇ ಆಗಿತ್ತ್. ಮನೆಗೆ ಬಂದವನೇ ಮೀಂದ್, ಅವ್ವ ನಿನ್ನೆದೋ ಮೊನ್ನೆದೋ ಮಂಜಂಗೇಂತ ತೆಗ್ದ್ ಹಿಸಿದ್ದ ಪಾಂಜದ ಗೈಪುಲಿ ಗಡ್ದ್ ಉಂಡು ಮಲ್ಗಿತ್.

ಬೆಳ್ಜರಿಗೆ ಬೇಗ ಎದ್ದವನೇ ಅವನ ಅಪ್ಪನ ಹೆಸರ್‌ಲಿ ಇದ್ದ ಕೇಪುನ ಬೆಡಿನನೂ ಕತ್ತಿನನೂ ತೆಕಂಡ್ ಕಾಡ್‌ಗೆ ಹೊರ್ಟತ್. ಅವ ಈಗ ಹೊರ್ಟದ್ ನಿಜಕ್ಕೂ ಬೇಟೆಗೆ ಅಲ್ಲ. ಆದಷ್ಟ್ ಬೇಗ ಒಂದ್ ನಾಲ್ಕ್ ಹೆಡೆಗೆಗೆ ಆವಸ್ಟ್ ಬೆತ್ತ ತರೊಮೋಂತ. ಬೆಡಿ ಒಟ್ಟಿಗೆ ಸಂಗಾತ ಬೇಕೇ ಬೇಕಲೆ. ಎಂತದಾರ್ ಆಯಸ್ಸ್ ಮುತ್ತಿದ್ದದ್ ಸಿಕ್ಕಿರೆ ಇರ್ಲಿಂತ ಬೆಡಿ ಹಿಡ್ಕಂಡಿತ್ತ್. ಅದೂ ಅಲ್ಲದೆ ಅಷ್ಟ್ ಬೇಗ

ಹೊರ್ಡಿಕೆ ಕಾರಣನೂ ಇತ್ತ್. ಕೆಳಗೆ ಬಟ್ಟಂಗಾಯಿ ಕರೆಲಿ ಈಚೆನ ಪುಡೆಲಿ ಬೆತ್ತದ ಹಿಂಡ್ಲ್‌ಗ ಇದ್ದೊ. ಯಾಗಾರ್ ಒಮ್ಮೊಮ್ಮೆ ಗಾರ್ಡ್‌ಗಳೋ, ಫಾರೆಸ್ಟ್ರೋ ಅಲ್ಲಿ ತಿರ್ಗಾಡ್ದು ಇತ್ತ್. ಅವು ಹೇಂಗಿದ್ದರೂ ಬಂದರೆ ಹತ್ತ್‌ಗಂಟೆಂದ ಮೇಲೆನೆ. ಅವು ಎಲ್ಲಿಯಾರ್ ಸಿಕ್ಕಿರೆ ದರ್ಮಕ್ಕೆ ದಮ್ಮಯ್ಯ ಹಾಕೋಕು. ಅದರ ಬದಲ್ ಅವು ಬಾಕೆ ಮುಂದೆನೇ ಹೋಗಿ ಆದಷ್ಟ್ ಬೆತ್ತ ಕಡ್ಕಂಡ್ ಬರೋಮೋಂತ ಅವನ ಯೋಚನೆ. ತುಂಬಾ ನಡ್ಯೊಕೂಂತ ಏನೂ ಇತ್ಲೆ. ಹುಡ್ಕೊಕೂಂತಳೂ ಇಲ್ಲೆ ಸೀದಾ ಹೋದವನೇ ಸೂರ್ಯ ಪೂರಾ ಮೇಲೆ ಬಾಕೆ ಮುಂದೇನೇ ಬೆತ್ತ ಕಡ್ಯಕೆ ಸುರುಮಾಡ್ತ್. ಆವಂಗೆ ಬೇಕಾದಾಂಗೇ, ಬೇಕಾದ್ದರ ಮಾತ್ರ ಹುಡ್ಕಿ ಕಡ್ಯಕೆ ಸುರು ಮಾಡ್ತ್. ಅವಂಗೆ ಸುಲಬಲಿ ಇದ್ದದ್ ಮಾತ್ರ ತೆಕಂಡ್ ಒಂದ್ ಐದಾರ್ ಹೆಡಗೆಗೆ ಅವಂಗೆ ಬೆತ್ತ ಆಕನ ಸುಮಾರ್ ಅಷ್ಟೇ ಹೆಡಗೆಗೆ ಆವ ಬೆತ್ತನ ಹಾಳ್ಂತ ಅಲ್ಲೇ ಕಡ್ದ್ ಹಾಕಿತ್. ಅದರ ಬಗ್ಗೆ ಅವಂಗೆ ಯಾವ ಚಿಂತೆನೂ ಇತ್ಲೆ. ಯಾಕೇಂತ ಹೇಳ್ರೆ ಅದ್ ಅವನ ಅಪ್ಪನ ಮನೆನ ಗಂಟೂ ಅಲ್ಲ, ಸ್ವಂತ ನೆಟ್ಟದೂ ಅಲ್ಲ. ಅಲ್ಲಿಂದ ಸೀದಾ ಬೆತ್ತದ ಹೊರೆನ ಹೊತ್ತ್‌ಕಂಡ್ ಬಂಗ ಆದರೂ ಸೇಂಕಿಕಂಡ್, ಬುಕ್ಕಿಕಂಡ್ ಗುಡ್ಡೆ ಹತ್ತಿತ್ತ್. ಅವನ ಉದ್ದೇಶ ನಿಜಕ್ಕೂ ಸರಿನೇ ಇತ್ತ್. ಅದರ ತೆಕಂಡ್ ಸೀದಾ ಮೇಲೆ ಹೋಗಿ ಬಟ್ಟಂಗಾಯಿ, ಚೋನಪ್ಪಾಡಿ, ಬಡ್ಡಡ್ಕ ತಲ್‌ಪುವ ದಾರಿ ಕರೇಲಿ ಎಲ್ಲಿಯಾರ್ ಅಡಂಗ್‌ಸಿ ಹಿಸಿರೆ, ಎಷ್ಟೊತ್ತಿಗಾರ್ ಅಲ್ಲಿಗೆ ಹೋಗಿ ಪುರ್ಸೊತ್ತ್‌ಲಿ ಕುದ್ದ್ ಬೆತ್ತನ ಸಿಗ್ದ್ ಬೇಕಾದಾಂಗೆ ಬಾಸ್, ಕಾಲ್ ಎಲ್ಲಾ ಮಾಡಿ ಹಿಸಿರೆ ಹೊರೆ ಕಡಿಮೆನೂ ಆದೆ. ಇನ್ನ್ ಒಂದ್ ಸರ್ತಿ ಹೀಂಗೇ ಕಡ್ದ್ ಸಿಗ್ದ್ ಹಿಸಿರೆ ನಾಳ್ದ್ ಹೊರಿಕನ ಅದ್ ಸೊಲ್ಪ ಮತ್ತುನು ಹಗುರ ಆದು. ಒಟ್ಟಾರೆ ಹೇಂಗೆ ಆದರೂ ಸರಿ ಒಂದ್ ಹದ್ನೈದ್ ಹೆಡಗೆನ ಬೆತ್ತನಾರ್ ತೆಕಂಡ್ ಹೋಕುಂತಳೇ ಅಂದಾಜ್ ಮಾಡಿ ಬಂದವ ಅವ. ಅವ ನೆನ್ಸಿಕಂಡ ಜಾಗೆ ಬಾತ್, ದಾರಿ ಸೀದಾ ಹೋದರೆ ಬಡ್ಡಡ್ಕಕ್ಕೆ, ಎಡ್ದ್‌ಗೆ ತೆಲ್ಗಿರೆ ಚೋನಪ್ಪಾಡಿಗೆ, ಚೆನ್ನೂರ್‌ಗೆ. ಎಡ್ದ್‌ಗೆ ತೆಲ್‌ಗವಲ್ಲೇ ನಾಕ್‌ಮಾರ್ ನಡ್ದ್ ಎಡ್ದಗೆ ಮತ್ತೆ ತೆಲ್ಗಿ, ಸ್ವಲ್ಪ ಕೆಳಗೆ ಇಳ್ದರೆ ದೊಡ್ಡ ಎತ್ತರದ ಒಂದ್ ಕರ್ಗಲ್ ಬಂಡೆ, ಸೀದಾ ಅದರ ಕೆಳಗೆನ ಪುಡೆಗೆ ಹೋಗಿ ಬೆತ್ತದ ಕಟ್ಟ್ ಕೆಳಗೆ ಹಾಕಿ ಉಸ್ಸಾಂತ ಕುದ್ದತ್. ಬೊಚ್ಚಿ ಹೋಗಿತ್ತ್. ಬೊಳ್ಪುಗೆ ಬಾಕನ ಅಡ್ಗೆ ಮನೇಲಿದ್ದ ತಣ್ಣ ತೆಳಿ ಕುಡ್ದ್ ಬಂದಿತ್ತ್ ಅಷ್ಟೆ. ಸುಮಾರ್ ಹೊತ್ತ್ ಕುದ್ದ್ ಬೊಚ್ಚಲ ತೆಕಂಡ್, ಬೆತ್ತದ ಹೊರೆನ ಕಲ್ಲ್‌ನ ಬುಡಲಿ ಅಡ್ಡ ಒರ್ಗ್‌ಸಿ ಹಿಸಿ ಸ್ವಲ್ಪ ದರ್ಗ್‌ನ ಕಾಣದಾಂಗೆ ಹಾಕಿ, ಒಂದ್ ಈಡ್ ಎಲಡ್ಕೆ ಬಾಯಿಗೆ ಹಾಕ್ಯಂಡ್, ಕತ್ತಿನ ಬೆಡಿ ಚೀಲಕ್ಕೆ ತುಂಬಸಿ ಹೆಗಲಿಗೆ ನೇತಾಕಿ, ಬೆಡಿನನೂ ಹೆಗಲಿಗೆ ಏರ್ಸಿ ಅಲ್ಲಿಂದ ಹೊರ್ಟತ್. ಇಲ್ಲಿವರೆಗೆ ಜೀವನ ನಿರ್ವಹಣೆನ ಕಾಯಕಲಿದ್ದ ನಾರಾಯಣ

ಈಗ ಒಮ್ಮೆನೇ ಬೇಟೆಗಾರ ಬೆಡಿನಾರಾಯಣ ಆಗಿ ಬದಲ್ ಆಗಿತ್ತ್. ನಾಲ್ಕ್ ಮಾರ್ ಎಡ್ದ್‌ಗೆ ಮನೆಗೆ ಹೋದ ದಾರಿ ಇದ್ದರೂ ದಾರಿನ ಬುಟ್ಟ್ ನಿಧಾನಲಿ, ಬಾರಿ ಸೂಕ್ಷ್ಮಲಿ ಕಾಡ್ ಗುಡ್ಡೆಗಳ ಸರ್ರಿಕಂಡ್ ನೆಲಕಾಣದ ಕುರ್ಕಿಲ್ ಕಾಡ್‌ಲಿ ಮನೆಕಡೆ ಇಳ್ಯಕೆ ಸುರ್‌ಮಾಡ್ತ್. ಒಂದ್ ಹತ್ತ್‌ಮಾರ್ ಇಳಿದು, ಸುಮ್ಮನೆ ಕೆಬಿಕೊಟ್ಟ್ ಏನಾರ್ ಶಬ್ದ ಕೇಳ್ದೆನೋಂತ ಸೂಕ್ಷ್ಮಲಿ ಕೆಬಿಕೊಡ್ತು. ಹೀಂಗೆ ಮಾಡಿಕಂಡ್ ಇಳ್ಕಂಡ್ ಹೋಕನ ಮೊಟ್ಟೆ ಮೇಲೆ ಮುಚ್ಚಂಗ ಹಾಂಕಾರಲಿ ಭೂಂಕ್, ಭೂಂಕ್‌ಂತ ಬೊಬ್ಬೆ ಹೊಡ್ಯತಿದ್ದೊ. ಮನ್ಸ್‌ಲಿ ಆಸೆ ಇದ್ದರೂ, ಹೊಟ್ಟೆ ತಾಳ ಹಾಕ್ತಿತ್ತ್. "ನಿಲ್ಲಿ ಮಕ್ಕಳೆ ನಿವುಗೆ ಬುದ್ದಿ ಕಲ್ಸದೆ ಇರಿಕಿಲೆ" ಮನ್ಸ್‌ಲೀ ಹೇಳಿಕಂಡ್ ಅದರ ಗಮನಿಸದಾಂಗೇ ಮನೆಕಡೆ ನಡ್ಯತ್ತಿತ್ತ್. ಇವನ ಇಂತಾ ರೀತಿನ ಕಂಡ್ ಮಕ್ಕಾರ್ ಮಾಡುವ ಹಾಂಗೆ ಹೊಟ್ಟ ಹಕ್ಕಿಗ ಫ್ಹೇ... ಫ್ಹೆಫ್ಹೆಫ್ಹೆ ಫ್ಹೆ....ಫ್ಹೆಫ್ಹೆಫ್ಹೆಂತ ಕೇಕೇ ಹಾಕಿ ನೆಗಾಡುವಾಂಗೆ ಮರ್ಟ್‌ಕಂಡ್ ಇದ್ದೊ. ಬೆತ್ತದ ಕಟ್ಟ್‌ನ ಹಿಸಿದ ಜಾಗೆಂದ ಸುಮಾರ್ ಒಂದ್ ಪರ್ಲಾಂಗ ಕೆಳಗೆ ಇಳ್ದಿರ್ದು ನಾರಾಯಣ ಒಮ್ಮೆನೇ ನಿತ್ತತ್. ಅದ್ ಅವನ ಆರನೇ ಇಂದ್ರಿಯನೋ ಅಥವಾ ಅವಂಗೇ ಬೇಟೆಗಾಗಿ ಮಾತ್ರ ಒಂದ್ ಹೆಚ್ಚಿನ ಇಂದ್ರಿಯ ಇತ್ತೋ. ದೇವ್ರಿಗೇ ಗೊತ್ತ್. ಆ ಸಮಯಲಿನೂ ಅವನ ಕೆಬಿಗೆ ಒಂದ್ ಸಹಜ ಅಲ್ಲದ ಶಬ್ದ ಕೇಳ್ದಾಂಗೆ ಆತ್. ಒಂದ್ ಸಣ್ಣ ಶಬ್ದ. ಎಂತದೋ ಸಣ್ಣ ಕಡ್ಡಿ ಮುರ್ದಾಂಗೆ, ಮಲ್ಗಿದಲ್ಲಿಂದ ಯಾವುದೋ ಸಣ್ಣ ಪ್ರಾಣಿ ಎದ್ದ್ ನಿತ್ತಾಂಗೆ. ಹೇಂಗೋ ಒಂದ್ ಅಸಹಜ ಶಬ್ದ ಅದ್ ಅವಂಗೆ ಕೇಳಿತ್ತ್. ಬಹುಷಃ ಅಂತ ಸಣ್ಣ ಶಬ್ದ ಕೂಡ ಅವಂಗೆ ಚೆಂಡೆ ಹೊಡ್ದಾಂಗೇ ಕೇಳಿರೊಕು. ಅದ್ಕೇ ಅವ ಬೆಡಿನಾರಾಯಣ. ಆ ಕ್ಷಣ ಅದ್ ಅವನ ಬೆಡಿ ಹೆಸರ್‌ಂದ ಹೆಚ್ಚ್‌ನ ಹುಲಿ ಹೆಸರ್‌ಗೆ ಬಡ್ತಿ ಬಾವ ಕಾಲದ ಪ್ರಾರಂಭದ ಒಂದ್ ಸಣ್ಣ ಶಬ್ದ ಅದಾಗಿತ್ತ್. ಮತ್ತೇನೂ ಕೇಳ್ತ್‌ಲೆ. ನಿತ್ತಲ್ಲಿಂದ ಮೊಸ್ಗದ ನಾರಾಯಣ ಹಾಂಗೇ ನಿತ್ತಿತ್ತ್. ಈಗ ಅವಂಗೆ ಹೊಟ್ಟೆನೂ ಹಿಸ್ತಿತ್ಲೆ. ಬೇರೆ ಯಾವ ಶಬ್ದನೂ ಕೇಳ್ತಿತ್ಲೆ. ಶಬ್ದ ಬಂದ ಕೆಳಗೆನ ಪುಡೆಗೆ ಹಿಸಿದ ಅವನ ಕಣ್ಣ್ ಅತ್ತಿತ್ತ ಕದಲ್ತಿತ್‌ಲೆ. ಹೆಗಲಿದ್ದ ಬೆಡಿ ಈಗ ಎಡ್ದ ಕೈಲಿತ್ತ್. ಯಾವ ಕ್ಷಣಲಿನೂ ಅದ್ ಅವನ ಭುಜಕ್ಕೆ ತಾಂಗ್‌ಕೊಡಿಕೆ ಕಾದ್ ನಿತ್ತಾಂಗಿತ್ತ್. ಕೆಳಗೆ ಪುಡೆಂದ ಮತ್ತೆ ಯಾವ ಶಬ್ದನೂ ಕೇಳ್ತಿತ್ಲೆ. ಕಲ್ಲ್‌ನಾಂಗೆ ನಿತ್ತ ನಾರಾಯಣನೂ ಅಲ್ಲಾಡ್ತ್‌ಲ್ಲೆ. ಸುಮಾರ್ ಹೊತ್ತ್ ಹೀಂಗೇ ಇರಿಕಾಕನ, ನಾರಾಯಣಂಗೂ ಸಂಶಯ ಕಂಡತ್. ನಾ ಕೇಳ್ದ ಶಬ್ದ ಎಂತದೋ... ಮರದ ಮೇಲೆಂದ ಒಣ್ಗಿದ ಕೋಲ್ ತುಂಡ್ ಬಿದ್ದದೊ ಎಂತದೋ ಆಗಿರೊಕು. ಸುಮ್ಮನೆ ನಿತ್ತ್ ಪ್ರಯೋಜನ ಇಲ್ಲೆಂತ, ಅಲ್ಲಿಂದ ಹೊರ್ಡಿಕೆ ಮನ್ಸ್ ಮಾಡ್ತ್. ಹೊರ್ಡಿಕೆ ಮುಂದೆ ಒಂದ್ ಬೀಡಿನಾರ್ ಹೊತ್ತಿಸಿಕಮೋಂತ ಹೇಳಿ ಜೋಬ್‌ಲಿದ್ದ ಹಜಾಜ್

ಬೀಡಿನ ತೆಗ್ದ್ ಕಡ್ಡಿ ಗೀರಿ ಕಿಚ್ಚಿಕೊಟ್ಟ್ ಒಂದ್ ದೊಡ್ಡ ದಮ್ಮು ಎಳ್ತ್. ಕಡ್ಡಿ ಪೆಟ್ಟಿಗೆನ ಬೀಡಿನ ಜೋಬ್‌ಗೆ ಹಾಕಿದವ ಅಲ್ಲಿಂದ ಕೆಳಗೆ ಇಳ್ಯಕೆ ನಿತ್ತಲ್ಲಿಂದ ಹೆಜ್ಜೆತೆಗ್ತ್, ಅವ ತೆಗ್ದ ಹೆಜ್ಜೆ ನೆಲಕ್ಕೆ ಮುಟ್ಟುವದರೊಳಗೆ, ಆಗ; ಆಗ ಕೇಳ್ತ್ ಒಂದು ಸಣ್ಣ ಶಬ್ದ. ಅಂದರೆ ಅದ್ ಕಡ್ಡಿ ಮುರ್ದದ್ ಅಥವಾ ಹೆಜ್ಜೆನ ಯಾವುದರ ಶಬ್ದನೂ ಅಲ್ಲ. ಒಂದ್ ಸಣ್ಣ ಸ್ವರಲಿ ಮರ್ಟಾಂಗೆ ಸಣ್ಣ ಪೇಂಕ್. ಪೇಂಕೇಂತ ಶಬ್ದ. ಸ್ವಲ್ಪ ಹೊತ್ತಲಿ ಮತ್ತೆ ಅದೇ ಕೇಳ್ತ್. ಎಂತದೂ ಆಗಿರ್ಲಿ ಇನ್ನ್ ನಿತ್ತ್ ಪ್ರಯೋಜನ ಇಲ್ಲೆ. ಅವ ಒಂದ್ ತೀರ್ಮಾನಕ್ಕೆ ಬಂದಿತ್ತ್. ಎಲ್ಲಿಯೋ ಕಪ್ಪೆನ ನುಂಗ್‌ತಿದ್ದ ಹಾವುನ ಬಾಯಿ ಒಳಗೆನೆ ಸಾಯುವ ಕಪ್ಪೆ ಮಾಡುವ ಸದ್ದ್ ಆಗಿರೊಕುಂತ ನೆನ್ಸಿಕಂಡರೂ ಸೂಕ್ಷ್ಮಲಿ ಕೆಳಗೆ ಇಳ್ತ್. ಅಷ್ಟೊತ್ತಿಗೆ ಸರಸರಾಂತ ದರ್ಗ್ ಶಬ್ದದೊಟ್ಟಿಗೆ ಕಂಡತ್ ಆ ಕೆಂಪ. ಅದೊಂದ್ ಮುಂಡಿ ಕೆಂಪ. ಮುಂಡಿ ಕೆಂಪಾಂತ ಹೇಳ್ರೆ ಹೆಣ್ಣ್‌ಕೆಂಪ. ಕ್ಷಣಲಿ ನಾರಾಯಣಂಗೆ ಕುದುರೆ ಎಳ್ದ್ ಗುರಿ ಒಂಬ್‌ಸಿ ಆಗಿತ್ತ್. ಕೊತ್ತ್ ಎಳ್ಯೊಕು, ಕೆಂಪ ಎದ್ರ್‌ಗೇ ಬಂದಾಗೆ ಅದ್ ಎಲ್ಲಿಂದ ಬಾತೋ ಅತ್ತ ಓಡ್ತು. ಗುಂಡ್ ಹೊಡ್ಯಕೆ ಆತ್ಲೆ. ಛೇ! ತಪ್ಪಿತಲೇಂತ ಹೇಳಿಕಾಕನ ಮತ್ತೆ ಅದ್ ಓಡಿ ಬಂದ್ ಅಲ್ಲೇ ನಿಂತ್ತತ್. ಇನ್ನ ಇದ್ ಸಿಕ್ಕಿಕಿಲೆಂತ ಹೇಳಿ ಕೊತ್ತ್ ಎಳ್ತ್. ಅವ ಕೊತ್ತ್ ಎಳಿದರೊಳಗೆ ಕೆಂಪ ಅಲ್ಲಿಂದ ಎರ್ಡ್ ಕುತ್ತ್ ತೆಗ್ದಾಗಿತ್ತ್. ಟಾಪ್ ಢೀಂ। ಇಡೀ ಕಾಡ್‌ಲಿ ಶಬ್ದ ಮೊಳ್ಗಿ ಕಂತಿತ್. ಬೊಬ್ಬೆ ಹೊಡ್ಕಂಡಿದ್ದ ಮುಚ್ಚಗ, ನೆಗಾಡಿಕಂಡ್ ಇದ್ದ ಹೊಟ್ಟಂಗ, ಒಮ್ಮೆನೇ ಸುಮ್ಮನಾದೋ. ದೊಡ್ಡ ಹಣ್ಣ್‌ನ ಮರದ ಕೊಡೀಲಿ ಕುದ್ದ್ ಹಣ್ಣ್‌ನ ತಿಂದ್‌ಕಂಡ್ ಗೂಂ....ಗೂಂ....ತ ಮರ್ಟ್‌ಕಂಡ್ ಇದ್ದ ಗುಳ್ಗುಮ್ಮೆನ ಹಿಂಡ್ ಒಮ್ಮೆನೇ ಎದ್ದ್ ಹಾರಿಕೆ ಸುರುಮಾಡ್ಡೊ. ಗುರಿ ತಪ್ಪಿಟೂಂತ ನಾರಾಯಣಂಗೆ ಗೊತ್ತಾತ್. ಅಂದರೂ ಬೇಟೆಗಾರರ ಒಂದ ಸಹಜ ಕುತೂಹಲ, ಎಲ್ಲಿಯಾರ್ ಒಂದ್ ಚಿಲ್ಲ್‌ಆರ್ ಹೆಟ್ಟಿರ್ದೋಂತ ಅದೇ ಕುತೂಹಲ, ಅವ ಗುಂಡ್ ಹೊಡ್ದ ಜಾಗೆಗೆ ಅಂದರೆ ಅವಂದ ಕೆಳಗೆನ ಪುಡೆಗೆ. ಓಡಿಕಂಡೇ ಇಳ್ತ್. ಕೆಂಪ ನಿತ್ತದ್ದ ಜಾಗೆನಹಿಂದೆ ಇದ್ದ ಕುರ್ಕಿಲ್ ದೆಯ್ಯಿನ ಸೊಪ್ಪ್ ತುಂಬಾ ಚಿಲ್ಲ್ ದಾಟಿದ್ ಒಟ್ಟೆಗ ಕಂಡೊ. ದೊಡ್ಡ ನಿರಾಶೆ ಆತ್. ಗುಂಡ್ ತಪ್ಪಿತ್‌ಂತ ಹೊಡ್ದ ಕ್ಷಣಕ್ಕೆ ಅವಂಗೆ ಗೊತ್ತಾಗಿತ್ತ್. ಹಾಳಾಗಿ ಹೋಗಲೀಂತ ಮನೆಗೆ ಪೋಯಿಂತ ಹೊಡ್ದ ಬೆಡಿನ ಮತ್ತೆ ತುಂಬ್‌ಸುವ ಗೋಜಿಗೆ ಹೋಗದೇ. ಅಲ್ಲಿಂದ ಹೊರ್ಟತ್. ಆಗ ಕೇಳ್ತ್ ಮತ್ತೆ ಅದೇ ಸಣ್ಣ ಕೀರಲ್ ಸ್ವರದ ಪೇಂಕ್. ಅತ್ತ ನೋಡ್ರೆ, ದೊಡ್ಡ ಗಜದ ಮರದ ಬುಡದ ಗಿಡ್ಡೆನ ಎದುರು ಅವನನೇ ನೋಡಿಕಂಡ್ ಪಿಳಿಪಿಳಿ ಕಣ್ಣ್‌ಬುಟ್ಟ್ ಕಂಡ್ ನಡ್ಗಿಕಂಡ್ ನಿತ್ತಕಂಡಿತ್ತ್ ಅ ಸಣ್ಣ ಹುಟ್ಟಿ ಹತ್ತದಿನ ಆಗದಿದ್ದ ಕೆಂಪನ ಮರಿ. ಓಡಿಕೆ ಅವಾಂಗೆ ಇದ್ದರೆನೂ ಹೆದ್ರ್‌ದ ಆ ಮರಿ ಹೆಜ್ಜೆ ಹಿಸಿಕೂ

ಆಗದೆ ನಿತ್ತಿತ್ತ್. ಇಡೀ ಮೈ ನಡ್ಗ್‌ತಿತ್ತ್. ಅದರ ನೋಡ್ದ ನಾರಾಯಣನ ಮನ್ಸೂ ಒಂದ್ ರೀತಿಲಿ ತಣ್ಣಂಗೆ ಆಗಿತ್ತ್. ಅವನ ಮನ್ಸ್‌ಲಿನೂ ಕರುಣೆನ ಒಂದ್ ಸಣ್ಣ ಎಳೆ ಇತ್ತ್. ಆದರೆನೂ ಅವನ ಮನ್ಸ್‌ಲಿ ಸುರೂಗೆ ಬಂದದ್ ಒಂದೇ. ಇದರ ಹಿಡ್ಕಂಡ್ ಹೋಗಿ ಕುಞ್ಞಣ್ಣಂಗೆ ಕೊಟ್ಟರೆ ಅವ್ಕೆ ಕುಶಿ ಆದೂಂತ ಮಾತ್ರ. ಆದರೆನೂ ಅದರೊಳಗೆ ಒಂದ್ ಅವಂಗೇ ಗೊತ್ತಿಲ್ಲದ ಕಾರುಣ್ಯದ ಸಂಗತಿನೂ ಇತ್ತ್. ಇದರ ಕುಞ್ಞಣ್ಣ ಲ್ಯಾಕ್‌ಲಿ ಸಾಂಕುವೋಂತ. ಅವಂಗೆ ಆಗ ಆ ಕ್ಷಣಲಿ ಯಾವ ಕೆಂಪ, ಯಾವ ಹುಲಿ ಎಂತದೂ ಬೇಕೂಂತಳೇ ಕಂಡತ್‌ಲೆ. ಹೆದ್ರಿ ಹಿಂದೆ ಹಿಂದೆ ಹೆಜ್ಜೆ ಹಿಸಿಕಂಡ್ ಇದ್ದ ಆ ಮರಿನ ಕೈಲಿ ಹಿಡ್ತ್. ಪ್ರೀತಿಲಿ ಅದರ ಎದೆಗೆ ಒತ್ತಿಕಂಡತ್. ಆ ಕ್ಷಣಲಿ .ಅವನ ಕಣ್ಣಿಲಿನೂ ಒಂದ್ ಎಲ್ಲದರನೂ ಮೀರಿ ನಿಲ್ಲುವ ಕರುಣೆನ ಕಡಲಿತ್ತ್. ಇನ್ನ್ ಮಾಡಿಕೆ ಬೇರೇನೂ ಇತ್ಲೆ. ಮರಿನ ಹಿಡ್ಕಂಡ್ ಮನೆಗೆ ನಡ್ತ್. ಇಷ್ಟರ್‌ಲಿನೂ ಅವಂಗೆ ಆಗ ಗೊತ್ತಾಗದ ಸಂಗತಿ ಒಂದೇ. ಅದರ ಅಲ್ಲಿನೇ ಬುಟ್ಟ್ ಹೋದರೆ ಅದರ ಅಮ್ಮ ಬಂದ್ ಅದರ ಕರ್ಕಂಡ ಹೋದೂಂತ. ಅಷ್ಟೆಲ್ಲಾ ಅವ ಯೋಚನೆ ಮಾಡ್ತ್‌ಲೆ. ಆದರೆ ಹಾಂಗೇ ಆಗಿಬುಡ್ತೂಂತ ಅವ ಆ ಕ್ಷಣಲಿ ನೆನ್ಸಿಕೂ ಸಾಧ್ಯ ಇತ್ಲೆ. ಆದರೆ ಅದ್ ಹಾಂಗೇ ಆಕೆ ಇನ್ನೂ ಸಮಯ ಬಾಕಿ ಇತ್ತ್.

ಕೆಂಪದ ಮರಿನ ಕೈಲಿ ಹಿಡ್ಕಂಡ್ ಬಾಕನ ಚೆನಿಯಣ್ಣಂಗೆ ಮನ್ಸ್‌ನೊಳಗೆ ಸ್ವಲ್ಪ ಕೋಪ ಬಾತ್. ಈ ರಗಳೆಗ ಎಲ್ಲಾ ಅವುಕೆ ಸರಿ ಆಗ್ತಿತ್ತ್‌ಲೆ. ಅವು ನೋಡಿದ್ದೊ.... ಅಲ್ಲ! ಆಟನೂ ಆಡ್ಸಿದ್ದೊ ಇನ್ನೂ ಮೈಲಿ ಪಟ್ಟೆ ಮೂಡದ ಮುದ್ದು ಹುಲಿ ಮರಿಗಳ. ಅಪ್ಪಯ್ಯಜ್ಜ ಹೊಡ್ದ ಹುಲಿನಮರಿಗಳ ಅವು ಕಂಡಿದ್ದೊ. ಆದರೆ ಅದುನು ಬೊದ್ಕಿತ್‌ಲೆ. ಸೆರೆತನಲಿ ಬೊದ್ಕುದರಂದ ಸಾಯುದೇ ಒಳ್ಳೆದ್‌ಂತ ಕಾಡ್‌ನ ಆ ಮಕ್ಕಳಿಗೂ ಗೊತ್ತಿತ್ತ್. ಬರೇ ಅಪ್ಪಯ್ಯಜ್ಜನ ಹುಲಿ ಮರಿಗಳ ಬಗ್ಗೆ ಮಾತ್ರ ಅಲ್ಲ. ಅಂತ ಎಷ್ಟೋ ಸಂಗತಿಗೆ ಚೆನಿಯಣ್ಣಂಗೆ ಗೊತ್ತಿತ್ತ್. ಜಾಸ್ತಿ ಮಾತಾಡ್ತ್‌ಲೆ. ಎಂತಕೆ ತಂದ ಮಾರಾಯಾ ಅದರ. ಅಲ್ಲೇ ಯಾಕೆ ಬುಟ್ಟು ಬಾತ್ಲೆ ಅಷ್ಟೆ ಚೆನಿಯಣ್ಣ ಹೇಳ್ದೋ.

ನಿಜಕ್ಕೂ ಆ ಕೆಂಪದ ಮರಿನ ನಾರಾಯಣ ತರೊಕೂಂತ ತಂದದೇ ಅಲ್ಲ. ಆ ಕ್ಷಣಕ್ಕೆ ಅವಂಗೆ ಕಂಡದ ಒಂದೇ. ಇದರ ತೆಕಂಡ್ ಹೋಗಿ ಕುಞ್ಞಣ್ಣಂಗೆ ಕೊಟ್ಟರೆ ಅವು ಇದರ ಲ್ಯಾಕ್‌ಲಿ ಸಾಂಕುವೋಂತ. ಬರೇ ಅಷ್ಟಲ್ಲ. ಕುಞ್ಞಣ್ಣಂಗೆ ಕುಶಿನೂ ಆದು ಹಿಂದೆ ನಾ ತಂದ ಸಾಮಾನ್‌ನ ಲೆಕ್ಕನೂ ತೀರ್ದೂಂತ. ಅವನ ಸ್ವಾರ್ಥದ ಒಳಗೆನೂ ಕರುಣೆನ ಕಣ್ಣಿತ್ತ್. ಎಂತದೂ ಆಗಲಿ ಅದರ ತಂದಾಗಿತ್ತ್. ನಾರಾಯಣನ ಅವ್ವಂಗೆ ಅದರ ಕಾಂಬಕಾನ ಯಾವ ಪ್ರೀತಿನೋ.... ಹೆಣ್ತನದ ಮುಗಿಯದೇ ಇರುವ ಹಂಬಲನೋ.... ಅದರ ಪ್ರೀತಿಲಿ ತಬ್ಬಿ ಹಿಡ್ದೊ. ನಡ್ಗ್‌ತಿದ್ದ

ಅದ್ಕೆ ಆ ಪ್ರೀತಿ ಹೇಂಗೆ ಗೊತ್ತಾತೋ ಈಗ ಅದ್ ಸ್ವಲ್ಪ ಹುಶಾರಾದಾಂಗೆ ಕಾಂಬತಿತ್ತ್. ಒಳಗೆ ಹೋಗಿ ಸ್ವಲ್ಪ ಗಂಜಿನ ಪಿಳ್‌ಂಚಿ ತಂದ್ ಅದ್ಕೆ ಕೊಡಿಕೆ ನೋಡ್ದೋ. ಉಹೂಂ. ಅದ್ ಅದರ ಮುಟ್ಟುದು ಬುಡಿ ಸರಿ ಕಣ್ಣ್ ಬುಟ್ಟ್ ಅದರ ಕಡೆ ನೋಡ್ತೂ ಇಲ್ಲೆ. ಅದ್ಕೆ ಅದ್ ಯಾವುದೂ ಬೇಡಾಗಿತ್ತ್. ಹುಟ್ಟಿ ಹತ್ತ್ ದಿನ ಆಗಿದ್ದರುನೂ ಈ ಹಂಗ್‌ನ ಅನ್ನಂದ ಸ್ವಾತಂತ್ರ್ಯ ಹೆಚ್ಚ್‌ಂತ ಅದ್ಕೆ ಆಗಳೇ ಗೊತ್ತಿತ್ತ್. ಯಾಗೋಳೂ ಬೊಳ್ಪ್‌ಗೆ ತಿಂಡಿಂತ ವಿಶೇಷ ಏನೂ ಮಾಡದೇ ಮರಗೆಳ್ಸ್, ಅಂಬೆಲೀಂತ ಉಂಬವು. ಅಂದ್‌ನ ದಿನ ಮಂಜ ಬಂದುದೂಂತ ಅವ್ವ ಬೊಡ್ಡಿಟ್ಟ್ ಮಾಡಿದ್ದೊ. ಹೊಟ್ಟೆ ಒಳಗೆ ಉಪವಾಸಲಿ ಹೊಟ್ಟೆಲಿದ್ದ ಹುಳುಗಳೂ ಸಾಯುವಂತ ಸ್ಥಿತಿಲಿದ್ದ ನಾರಾಯಣ ಅಲ್ಲೇ ಇದ್ದ ಬೊಳ್ನಾರ್ ಬೊಳ್ಳಿಲಿ ಆ ಸಣ್ಣ ಕೆಂಪದ ಮರಿನ ಅಲ್ಲಿನ ಗೂಟಕ್ಕೆ ಕಟ್ಟಿ ಹೊಟ್ಟೆ ತುಂಬಾ ಬೊಡ್ಡಿಟ್ಟ್ ತಿಂದ್ ಸೊಲ್ಪ ಬೊಚ್ಚೆಲ್ ತೆಕಂಡತ್. ಹೊತ್ತ್ ಆಗಲೇ ನೆತ್ತಿಗೆ ಏರಿಕೆ ಸುರುಆಗಿತ್ತ್. ಯಾಗೊಳೂ ಹಗಲ್ ಮಲ್ಗದಿರುವ ನಾರಾಯಣ ಮಣೆನ ಒಂದರ ತಲೆಗಡಿಗೆಹಿಸಿ ಅಡ್ಡಕ್ಕೆ ತಿಂಟೆಲಿ ಮಲ್ಗಿತ್. ಚೆನಿಯಣ್ಣ ಮಾಡಿಕೆ ಏನೂ ಕೆಲ್ಸ ಇಲ್ಲದೇ ಸುಮ್ಮನಿರ್ದು ಯಾಕೇಂತ ಯಾಗಳೋ ತಂದ್ ಹಾಕಿದ ಮಡ್ಲ್ ತಕಂಡ್ ಚೆದ್ದಲ್ ಮೆಡ್ಯತಿದ್ದೊ. ಎಷ್ಟೊತ್ತ್ ಅವ ಹಾಂಗೇ ಮಲ್ಕಂಡಿತ್ತೊ. ಅವ್ವ ಕರ್ಯಕಾಕನನೇ ಎಚ್ಚರ ಆದ್. ಅವು ಹೇಳ್ದೊ. ಆ ಮರಿ ಎಂತದೂ ತಿಂಬೊದಲೆ ಮಾರಾಯ. ಅದ್ ಹೀಂಗೆ ಇದ್ದರೆ ಬೊದ್ಕಿಕಿಲೆ. ನೀ ಸೀದಾ ಹೋಗಿ ಅದ್ ಎಲ್ಲಿ ಸಿಕ್ಕಿತೊ ಅಲ್ಲೇ ಬುಟ್ಟ್ ಬಾ. ಒಂದ್ ರೀತಿಲಿ ಅಧಿಕಾರಯುತ ಆಗಿಯೇ ಅವು ಆ ಮಾತ್ ಹೇಳಿದ್ದೊ. ಗೂಟದ ಕಂಬಕ್ಕೆ ಕಟ್ಟಿಸಿಕಂಡ್ ನಿತ್ತಿದ್ದ ಆ ಮರಿ ಇನ್ನೂ ನಡ್ಗ್‌ತಿತ್ತ್. ಮರ್ಟ್‌ಕಂಡ್ ಇದ್ದದಕ್ಕೆ ಧ್ವನಿ ಇನ್ನೂ ಕ್ಷೀಣ ಆಗಿತ್ತ್. ಆ ಕ್ಷಣಕ್ಕೆ ಒಮ್ಮೆನೇ ಮಿಂಚ್ ಹೊಡ್ದಾಂಗೆ ನಾರಾಯಣನ ತಲೆಗೆ ಒಂದ್ ವಿಚಿತ್ರ ಯೋಚನೆ ಬಾತ್. ಅದ್ ಬರೇ ಯೋಚನೆ ಅಲ್ಲ. ಅದೊಂದ್ ಯೋಜನೆ. ಹೌದು। ಅದೇ ಸರೀಂತ ಕಂಡತ್. ಅವನ ಯೋಚನೆನ ಎಲ್ಲಿಯಾರ್ ಅವ್ವಂಗೆ ಹೇಳ್ರೆ ಬೊಯ್ಗಿಳ್ ಸಿಕ್ಕುದೂಂತ ಗೊತ್ತಿತ್ತ್. ಸ್ವಲ್ಪ ಹೊತ್ತ್ ಬೊಚ್ಚೆಲ್ ತಕಣೇಂತ ಮಲ್ಗಿದ್ದರೂ ತುಂಬಾ ಹೊತ್ತೇ ಮಲ್ಗಿತ್ತ್. ಊಟದ ಹೊತ್ತ್ ಕಳ್ದಿತ್ತ್. ಹೊಟ್ಟೆ ಹಿಸದಿದ್ದರೂ ಬಾಕನ ಎಷ್ಟ್ ಹೊತ್ತ್ ಆದೋಂತ ಸ್ವಲ್ಪ ಉಂಡ್‌ಕಂಡತ್. ಅವನ ಕೇಪುನ ಬೆಡಿನ ತುಂಬ್ಸಿತ್. ಬೊಳ್ಪುಗೆ ಹೊಡ್ದ ಗುಂಡ್ ಕೇಪು ಬೆಡಿ ಆಗಿತ್ತ್. ಹಾಂಗಾಗಿ ಮೇಪುಳ್ಳ್‌ಗೆ ಮೊದ್ದ್ ಬಂದುಟೋ ನೋಡಿಕಂಡತ್. ಬೆಡಿಚೀಲ ಹೆಗಲಿಗೆ ನೇತಾಕಿ ಕೆಂಪದ ಮರಿನ ಹಿಡ್ಕಂಡ್ ಬೆಡಿ ತೆಕಂಡ್ ಕಾಡ್ ಕಡೆಗೆ ಹೊರ್ಟತ್. ಚನಿಯಣ್ಣಂಗೆ ಮಂಜ ಆ ಮರಿನ ಮತ್ತೆ ಕಾಡಗೆ ಬುಟ್ಟ್ ಬಾಕೆ ಹೊರ್ಟದ್ ನೋಡಿ ಕುಶಿ ಆತ್. ಅವನ ಅವ್ವಂಗೂ ಹಾಂಗೇ

ಆಗಿತ್ತ್. ಆದರೆ ಅವ್ಕೆ ಇಬ್ಬರಿಗೂ ಅವನ ಮನ್ಸ್‌ಲಿ ಇದ್ದ ಕೆಟ್ಟ ಯೋಜನೆನ ಸುಳಿವು ಸಿಕ್ಕಿತ್ಲೆ. ನಾರಾಯಣ ಮಾತ್ರ ತುಂಬಾ ಉತ್ಸಾಹಲಿ ಕಾಡ್ ಹತ್ತಿಕೆ ಸುರುಮಾಡ್ತ್.

ಮರಿತಂದ ಜಾಗೆ ಮನೆಗೆ ಹಕ್ಕಲೆಲೇ ಇದ್ದ ಕಾರಣ ಅಲ್ಲಿಗೆ ಬೇಗ ತಲ್ಪಿತ್. ಮರಿನ ಅಲ್ಲೇ ಒಂದ್ ಗಿಡ್ಡೆಗೆ ಕಟ್ಟಿ ಹಾಕಿತ್. ಮನೆಂದ ಬಾಕಾಕನೇ ತಂದ ಬೊಳ್ನಾರ್ ಬೊಳ್ಳಿನ ಸಿಗ್ದ್ ತುಂಡ್ ತುಂಡ್‌ಗಳ ಸೇರ್ಸಿ ಕಟ್ಟಿ ಬೊಳ್ಳಿನ ಒಂದ್ ಇಪ್ಪತ್ತೈದು ಅಡಿ ಉದ್ದ ಮಾಡ್ತ್. ಒಂದ್ ಪುಡೆನ ಬೊಳ್ಳಿನ ಅವನ ಕಾಲ್‌ಗೆ ಕಟ್ಟಿ ಇನ್ನೊಂದ್ ಕರೆನ ಗಿಡ್ಡೆಗೆ ಕಟ್ಟಿ ಹಾಕಿದ ಮರಿನ ಅಲ್ಲಿಂದ ಬಿಚ್ಚಿ ಅದರ ಕುತ್ತಿಗೆಗೆ ಅವನ ಕಾಲಿಗೆ ಕಟ್ಟಿದ ಬೊಳ್ಳಿಗೆ ಕಟ್ಟಿ ಆ ಮರಿ ಸಿಕ್ಕಿದ ಮರದ ಕರೇಲಿ ಇದ್ದ ಗಬ್ಬಲ್ ಮರದ ಬುಡಲಿ ಕುದ್ದತ್. ಅವ ಕುದ್ದ ರೀತಿ ಹೇಂಗಿತ್ತ್‌ಂತ ಹೇಳ್ರೆ ಬುದ್ಧ ಬೋಧಿ ಮರದ ಕೆಳಗೆ ತಪಸ್ಸ್‌ಗೆ ಕುದ್ದಾಂಗಿತ್ತ್. ಯಾರೇ ಆಗಿದ್ದರುನೂ ಮರಿನ ಒಂದ್ ಕಡೆ ಕಟ್ಟಿ ದೂರಲಿ ಕುದ್‌ತ್ತಿದ್ದೊ. ಆದರೆ ನಾರಾಯಣನ ಮನ್ಸ್‌ಗೆ ಹೊಳ್ದದೇ ಬೇರೆ. ಎಲ್ಲಿಯಾರ್ ಪೆರ್ಚಿ ಆದ ಕೆಂಪದ ಮರಿನ ಅಮ್ಮ ಅಲ್ಲಿಗೆ ಬರದಿದ್ದರೆ ಅಲ್ಲಿಂದ ಬೊಳ್ಳಿ, ಮರಿ ಸಮೇತ ಬೇರೆ ಕಡೆ ಕುದ್ರಕ್‌ಂತ. ಆಗ ಎಲ್ಲೊ ಗಿಡ್ಡೆ ಕಟ್ಟಿ ಹಾಕಿದ ಮರಿನ ಮತ್ತೆ ಬಿಚ್ಚಿ ತೆಕಂಡ್ ಹೋಗಿ ಬೇರೆಕಡೆ ಕಟ್ಟಿ ಕುದ್ರುದರ್‌ಂದ ಕಾಲಿಗೆ ಕಟ್ಟಿ ಕುದ್ರುದೇ ಒಳ್ಳದೂಂತ. ಒಟ್ಟಾರೆ ಅದ್ ಅವನ ಅನುಭವ. ಸುಮಾರ್ ಇಪ್ಪತ್ತ್ ಅಡಿ ದೂರಲಿ ಆ ಗಂಟ್ಲ್‌ಗೆ ಬೊಳ್ಳಿ ಕಟ್ಟಿಸಿಕಂಡಿದ್ದ ಮರಿ ಅದೊಂದ್ ಬಂಧನನ ಬುಟ್ರೆ ಮನೇಲಿ ಇರಿಕಾಕನ ಇದ್ದದರಿಂದ ಸ್ವಲ್ಪ ಚೇತರಿಕೆಲೇ ಇತ್ತ್. ಅದರ ಕಣ್ಣ್‌ನ ಎದ್‌ರ್ ಈಗೊಂದ್ ಸ್ವಾತಂತ್ರ್ಯದ ಸಣ್ಣ ಆಶಾಭಾವನೆ ಇತ್ತ್. ಅಮ್ಮ ಬಾದು ಈ ರಾಕ್ಷಸಂದ ನನ್ನ ಬುಡ್ಸಿ ಕರ್ಕಂಡ್ ಹೋದು.. ಅದ್ಕೆ ಅದೊಂದ್ ಬಿಡುಗಡೆನ ನಂಬಿಕೆ ಇತ್ತ್.

ನಾರಾಯಣ ಕುದ್ದ ಜಾಗೆನ ಎದ್ರ್ ಒಂದ್ ಗಿಡ್ಡೆ ಇತ್ತ್. ಅವ ಕುದ್ದಕಂಡ್ ಇರ್ದು ಕೆಳಗೆಂದ ಬಾವ ಯಾವ ಪ್ರಾಣಿಗಳಿಗೂ ಗೊತ್ತಾಕಿಲೆ. ಆ ಗಿಡ್ಡೆಂದ ಕೆಳಗೆ ಒಂದಿಪ್ಪತ್ತಡಿ ದೂರಲಿ ಬೊಳ್ಳಿಂದ ಬುಡ್ಸಿಕಂಬಕೆ ಎಳ್ದಾಡ್ದ ಕೆಂಪದ ಮರಿಗೆ ಬೊಚ್ಚಿ ಹೋಗಿತ್ತ್. ಆ ಪ್ರಯತ್ನನ ಬುಟ್ಟ್ ಸುಮ್ಮನೆ ನಿತ್‌ಕಂಡ್ ಪೇಂಕ್, ಪೇಂಕ್‌ಂತ ಮರ್ಡಿಕೆ ಸುರು ಮಾಡ್ತ್. ಸ್ವಲ್ಪ ಹೊತ್ತ್ ಹಾಂಗೇ ಮರ್ಡುದು ಮತ್ತೆ ನಿಲ್ಲುದು ಹೀಂಗೇ ಸುಮಾರ್ ಹೊತ್ತ್ ಕಳ್ತ್. ನಾರಾಯಣಂಗೆ ಮಾತ್ರ ನಂಬಿಕೆ ಇತ್ತ್. ದೊಡ್ಡ ಕೆಂಪ ಬಂದೇ ಬಾದೂಂತ. ಅವನೂ ಶಬ್ದ ಬಾವಷ್ಟೂ ಜೋರ್ ಉಸ್‌ರಾಡದೆ ತಪಸ್‌ಗೆ ಕುದ್ದವರಾಂಗೆ ಕುದ್ದಕಂಡೇ ಇತ್ತ್. ಹೀಂಗೆ ಅವ ಕುದ್ದ್ ಸುಮಾರ್ ಒಂದ್ ಒಂದೂವರೆ ಗಂಟೆನೇ ಕಳ್ದ್ ಹೋಗಿರ್ದು. ಆಗ ಸಮಯ ಸುಮಾರ್ ಐದೂವರೆ ಕಳ್ದಿರ್ದು. ಕಾಡಲಿ ಸೂರ್ಯ ಒಮ್ಮೆ ಪಶ್ಚಿಮಲಿ ಇಳ್ಕಂಡು

ಹೋದಾಂಗೆ ಒಮ್ಮೆನೇ ಕತ್ತಲೆ ಆದಾಂಗೆ ಆದೆ. ಅದರ್ಲಿನೂ ಬಟ್ಟಂಗಾಯಿನಂತ ಕಾಡ್‌ಲಿ ನಟ್ಟ ಮಧ್ಯಾಹ್ನ ಮಾತ್ರ ಸರೀ ಬಿಸ್‌ಲ್ ನೆಲಕ್ಕೆ ಬೀಳ್ದು ಏನೋ. ಅಂತಾ ಕಾಡ್ ಅದ್. ಅಂತಲ್ಲಿ ಹಿಂಬತ್ ಐದ್ ಗಂಟೆ ಕಳ್ಯಕನನೇ ಕತ್ತಲೆ ಆದಂಗೆ ಆದೆ. ಮೆಲ್ಲಂಗೆ ಕತ್ತಲ್ ಕವಿದ್‌ಕಂಡ್ ಇತ್ತ್. ಅದೇ ಸುಮಾರ್‌ನ ಹೊತ್ತ್‌ಗೆ ಚೋನಪ್ಪಾಡಿ ತಟ್ಟ್‌ಂದ ಪಲ್ಲೆಕಾಯಿ ಬೊಳ್ಳಿನ ಹಿಂಡ್‌ನ ಸ್ವಲ್ಪ ಮೇಗಡೆಂದ ಕೆಂಪ ಒಂದ್ ಮರ್ಡುದು ಕೇಳ್ತ್. ಒಂದ್ ಕ್ಷಣ ಕೆಬಿನ ನಿಮರ್ಸಿ ಕೇಳ್ತ್ ನಾರಾಯಣ. ಅವಂಗೆ ಆ ದನಿ ಮುಂಡಿ ಕೆಂಪಂದ್ ಅಲ್ಲ ಅದ್ ಕೊಂಬಂದ್‌ಂತ ಗೊತ್ತಾತ್. ಅಂದರೆ ಮುಂಡಿನ ಕೊಂಬ ಕರ್ಕಂಡುಟ್ಟು. ಅವಂಗೆ ಯಾವ ಮಗ್ಗಿ ಲೆಕ್ಕಾಚಾರ ಆಗಲಿ, ಯಾವುದೇ ಥಿಯರಿ ಆಗಲಿ ಗೊತ್ತಿಲ್ಲೆ. ಆದರೂ ಅವಂಗೆ ಒಂದ್ ಅರ್ಥ ಆಗಿತ್ತ್. ಮುಂಡಿನ ಕೊಂಬ ಕರ್ಕಂಡ್ ಉಟ್ಟೊಂತ. ಅದರ ಅರ್ಥ ಕೊಂಬ ಮುಂಡಿನ ಹುಡ್ಕಿಕಂಡ್ ಉಟ್ಟೊಂತ. ಅಂದರೆ ಅವೆರಡೂ ಹಕ್ಕಲೆ ಇಲ್ಲೆಂತಾದರೆ, ಮರಿನ ಕಳ್ಕಂಡ ಕೆಂಪ ಇಲ್ಲೆಲ್ಲೋ ಆಸ್‌ಪಾಸ್‌ಲೇ ಇರೋಕು. ಬ್ರೇಂಕ್.....ಬ್ರೇಂಕ್...ಸುಮಾರ್ ಸರ್ತಿ ಕರ್ದ ಕೊಂಬನ ಅರ್ಬಟೆ ಸುರಮಾಡಿಕನ ಇದ್ದಾಂಗೆ ಈಗ ಇತ್ಲೆ. ಸುರು ಸುರುಲಿ ಜೋರ್ ಮೇಲೆ ಮೇಲೆ ಮರ್ಬದ್ ಈಗ ಆಗೊಮ್ಮೆ ಈಗೊಮ್ಮೆ ಮರ್ಬ್‌ಕಂಡ್ ಇತ್ತ್. ಆದರೆ ಯಾವುದೋ ಅಪಾಯನ, ಕಳ್ದುಹೋದ ಮರಿನನೇ ನೆನ್ಸಿಕಂಡ್ ಇದ್ದ ಮುಂಡಿ ಕೆಂಪ ಅದನ್ನೇ ಕೊಂಬ ಕರಿದೂಂತ ಗೊತ್ತಿದ್ದರೂ ಉತ್ತರಕೊಡಿಕಾಗದೇ ಇದ್ದದ್ ಕಡೇಗೆ ತಡ್ಯಕಾಗದೇ ಬ್ರೇಂ... ಕ್....ಬ್ರೇಂ...ಕ್‌ಂತ ಒಂದೆಡ್ಡ್ ಸರ್ತಿ ಮರ್ಬ್ ಸುಮ್ಮನಾತ್. ಅದರ ಮರ್ಡಟ ನಾರಾಯಣನ ಮನೆಗೆ ಹೋವ ದಾರಿಂದ ಆಚೆಂದ ಕೇಳ್ತ್. ನಾರಾಯಣಂಗೆ ಒಂದ್ ರೀತಿಲಿ ಹೀಂಗೆ ಕುದ್ದದರ ಸಾರ್ಥಕತೆ ಹಕ್ಕಲೇ ಉಟ್ಟೊಂತ ಗೊತ್ತಾತ್. ಅವನ ಏಕಾಗ್ರತೆ ಇನ್ನೂ ಹೆಚ್ಚಾತ್. ಕಂಡಿತಾ ಅದೆರ್‌ಡರ್ಲಿ ಒಂದಾರೂ ಇಲ್ಲಿಗೆ ಬಂದೇ ಬಾದು. ಅದ್ ಅವನ ಅನುಭವ. ಎರ್ಡ್ ಕಡೆಂದ ಕೇಳ್ದ ಕೆಂಪಗಳ ಮರ್ಡಟ ಕೇಳ್ದ ಮರಿ ಕೆಂಪ. ಅದರ್ಲಿ ಉಡುಗಿಹೋಗಿದ್ದ ಶಕ್ತಿನೆಲ್ಲಾ ಒಟ್ಟಿಗೆ ಮಾಡಿ ಪೇಂಕ್, ಪೇಂಕ್‌ಂತ ಸ್ವಲ್ಪನೂ ನಿಲ್ಸದೆ ಬೊಬ್ಬೆ ಹೊಡ್ಯಕೆ, ಸುರುಮಾಡ್ತ್. ಗಂಟೆ ಆರ್ ಕಳ್ದಿತ್ತ್, ಕತ್ತಲೆ ಕ್ಷಣ ಕ್ಷಣಕ್ಕೂ ಹೆಚ್ಚಾಗಿತ್ತ್. ಆದರೆ ನಾರಾಯಣ ಕಣ್ಣೂ ಹಾಂಗೇನೇ ಅದ್ಕೆ ಹೊಂದಿಕಂಡ್ ಇತ್ತ್. ಆ ಸಮಯಲೂ ಅವನ ಕಣ್ಣಳತೆನ ದೂರಲಿ ಸಣ್ಣ ಅಲ್ಲಾಟನೂ ಅವಂಗೆ ನಿಚ್ಚಳ ಆಗಿ ಕಂಡ್‌ಕಂಡ್ ಇತ್ತ್.

ಕಾಡ್ ಹೇಂಗೇಂತ ಹೇಳ್ರೆ ಆದ್ ಹೇಂಗೇಂತ ವರ್ಣಿಸಿಕೇ ಆಕಿಲೆ. ನಿಸರ್ಗನ ಅನುಭವಿಸಿದವ್ಕೇ ಗೊತ್ತ್ ಅದರ ಸಮೃದ್ಧಿನ, ಸಂಪತ್ತ್‌ನ, ಸೌಭಾಗ್ಯನ, ಸಂತೋಷನ. ಅದರೊಳಗಿರುವ ಗೂಢತೆನ, ಘನತೆನ, ರಹಸ್ಯನ, ಇಂದ್‌ಗೆನೂ

ಯಾರಿಗೂ ಆಳ್ಯಕೆ ಸಾಧ್ಯ ಇಲ್ಲೆ. ಇನ್ನುಮುಂದೆನೂ ಹಲವಾರು ಸತ್ಯಗ ಸತ್ಯನೋಂತ ಹೇಳ್‌ವಷ್ಟರ ಮಟ್ಟಿಗೆ, ಕಂಡರೂ ನಂಬದಿರುವಷ್ಟ್ ಆಶ್ಚರ್ಯ ಅಂತಾ ನಿಭಿಡ ಕಾಡ್‌ಗಳಲಿ ಉಟ್ಟು. ಅಂತಾ ಕಾಡ್‌ಗಳಲಿ ಬಟ್ಟಂಗಾಯಿ, ಚೋನಪ್ಪಾಡಿಗಳೂ ಹೌದು. ಪಶ್ಚಿಮ ಘಟ್ಟಗಳ ಈ ಸಸ್ಯ ಸಾಮ್ರಜ್ಯಲಿ ಏನು ಉಟ್ಟು ಏನ್ ಇಲ್ಲೆ ಅದರ ಅರ್ಥ ಇಲ್ಲಿವರೆಗೂ ಯಾರೂ ಮಾಡ್ತ್‌ಲೆ. ಎಲ್ಲವೂ ಹೇಳ್ದು ಒಂದೆ. ಎಲ್ಲದರನೂ ಉಳ್ಸಿಕಣೊಕೂಂತ. ಎಲ್ಲನೂ ಒಮ್ಮೆನೇ ಪ್ರಾರಂಭ ಆತ್ಲೆ. ಇಲ್ಲಿನ ಕಾಡ್‌ಲಿ ದಿನದಿನಾ ವಿಶೇಷಗ ನಡ್ಕಂಡೇ ಉಟ್ಟು. ಅದರ ಬೆಳವಣಿಗೆ, ಅದರ ಬಗ್ಗೆ ಯಾರೂ ಯೋಚನೆ ಮಾಡ್ತುಲೆ. ಅದ್ ಕಾಡ್‌ನ ನಡುಲಿ ನಿತ್ತ್ ಅದರ ಅನುಭವಿಸಿ ಕಾಕನ ಅನುಭವಿಸುವಂತ ಮನಸ್ಸ್‌ಗೆ ಇದ್ದದೆ. ಅಮೇರಿಕಾದ ಪ್ರಪಂಚದ ಅತ್ಯಂತ ಚಟುವಟಿಕೆ ಇರುವ ನ್ಯೂಯಾರ್ಕ್‌ನ "ಟೈಂ ಸ್ಕ್ವಯರ್"ನ ಸ್ಥಳಲಿ ಆಗ್ ಹೋಗ್‌ಗ ಏನೋ ಆದದಂರ್ದ ಮಹತ್ವದ ಘಟನೆಗ ಇಲ್ಲಿ ನಡ್ಯತಿದ್ದದೆ. ಕಣ್ಣೆತ್ತಿ ಮೇಲೆ ನೋಡಿರೆ ಆಕಾಶನೇ ಕಾಂಬೊದುಲೆ. ಅಷ್ಟ್ ದೊಡ್ಡ ಆಕಾಶಕ್ಕೇ ಚಪ್ಪರ ಹಾಕಿದಂತಾ ಕಾಡ್. ಎಂತಾ ಕಾಡ್. ಈ ಪ್ರಪಂಚದ ಭವಿಷ್ಯನನೇ ಅದರ ಕಾಲ್ಬುಡಲಿ ಹಿಸಿಕಂಡಂತಾ ಕಾಡ್.

ಯಾರಿಗಾರ್ ಇಂದ್‌ನ ಹೆಚ್ಚಿನ ನವಜನಾಂಗಕ್ಕೆ ಗೊತ್ತೊಟೋ? ಈ ಕಾಡ್‌ಗಳಲಿ ಇರುವ ಸಮಸ್ತ ಸಂಪತ್ತ್. ಮತ್ತಿ, ಹೊನ್ನೆ, ಬೂರಗ, ಕಿರಾಲಬೋಗಿ, ಬೀಟೆ, ಗಂಧ ಇದೆಲ್ಲವೂ ಎಲ್ಲವುಕೂ ಗೊತ್ತಿರುವ ಮರಗ, ಅದರಡಿಲಿ ಬೆಳೆವ ಅಪಾರ ಸಸ್ಯರಾಶಿ, ಅಷ್ಟೇ ಅದ್ಭುತ, ಅಮೂಲ್ಯ ಇಲಾಖೆ ನೀಡುವ ಯಾವ ಪದವಿನೂ, ಸರ್ಕಾರ ಕಾಂಬ ದೃಷ್ಟಿನೂ, ಈ ದೇಶ ಕಂಡ ಕರಾಳ ಸೂರ್ಯ ಮುಳುಗದ ಸಾಮ್ಯಾಜ್ಯನೂ ಇದ್ ಯಾವುದಕ್ಕೂ ಇವರ ಇಲ್ಲಿಂದ ಇಲ್ಲಿವರೆಗೆ ಅಲ್ಲಾಡ್ಸಿಕೆ ಆತ್ಲೆ. ಅಂತಾ, ಈ ದಟ್ಟ ಕಾನನ ಒಳಗೆ ಸ್ವಚ್ಛವಾಗಿ ವಿಹರಿಸುವ ಪ್ರಾಣಿ ಪಕ್ಷಿಗ ಒಳೊ. ಹುಳ ಹುಪ್ಪಡಿಗ ಒಳೊ.. ನೆಲದೊಳಗೆ ನೆನ್ಸಿಕೇ ಆಗದಿರುವಂತ ಖನಿಜ ಸಾಮ್ರಾಜ್ಯಗ ಒಳೊ.. ಯಾವುದಿಲ್ಲೆ ಇಲ್ಲಿ.. ಎಲ್ಲಾನೂ ಉಟ್ಟು.

ನಾರಾಯಣಂಗೆ ಯಾವುದೂ ಇದ್ ಗೊತ್ತಿಲೆ. ಅವಂಗೆ ಗೊತ್ತಿರ್ದು ಒಂದೇ. ಇಲ್ಲಿ ಬೊದ್ಕಿಕೆ ಎಂತದ್ ಬೇಕೋ ಅದ್ ಮಾತ್ರ. ಅವನಂತ ಮುಗ್ದತೆನೇ ಇಂದಿಗೂ ನಮ್ಮ ಜೀವನನ ಸಮತೋಲನಲಿ ಕಾಪಾಡಿಕಂಡ್ ಉಟ್ಟು. ಅವ ಸ್ವಾರ್ಥಿ ಆಗಿದ್ದರೆ, ಅಂತಾ ಜನಾಂಗಗ ಹಾಂಗೇ ಉಳಿಯದಿದ್ದರೆ, ಇಂದ್ ಈ ಪೇಟೆ, ಈ ರೀತಿ ಈ ನಡವಳಿಕೆ ಇದೆಲ್ಲಾ ಇರ್ತಿತ್ತೋ ಇಲ್ಲೆನೋ. ಹಾಂಗೆ ಆಗಿರೊಕು, ಅಂತವರ ಹಾಂಗೇ ಮುಗ್ದತೆಲಿ ಉಳ್ಸಿಯೊಳೊ. ಯಾವ ಸಾಮ್ಯಾಜ್ಯನೂ ಇದರ್ನ್ದಂದ ದೊಡ್ಡದಿತ್ಲೆ. ಅದ್ ವಿಜಯನಗರ ಇರ್ದು, ಮೊಗಲ್‌ಇರ್ದು, ಅಯೋದ್ಯೆ ಇರ್ದು, ಅಮರಾವತಿ ಇರ್ದು, ಹೆಚ್ಚೇಕೆ ಸೂರ್ಯ ಮುಳುಗದಿದ್ದ ಬ್ರಿಟಿಷ್ ಸಾಮ್ರಾಜ್ಯ

ಇದ್ದಿದ್ದರ್ಲೆ... ಆದರೆ ಅದೆಲ್ಲವೂ ಇಂತಾ ನಿಸರ್ಗ ದಟ್ಟಣೆನ ಸಾಮ್ರಾಜ್ಯದ ಎದ್‌ರ್ ಒಂದ್ ಸಣ್ಣ ಕಲ್ಪನೆಗ ಮಾತ್ರ. ಈ ಸಮೃದ್ಧಿ ಕಾಡ್‌ನೆಡೆಲಿ ಮನುಷ್ಯ ಎಷ್ಟ್ ಕುಬ್ಜ. ಅವನ ಕಲ್ಪನೆಗಳ ಮೀರಿ, ಯಾವುದು ಅವ ತಿಳ್ಕಂಡ್ ಉಟ್ಟೊ ಅದೆಲ್ಲಾ ಇಲ್ಲಿ ಕೇವಲ ಒಂದ್ ತೃಣಗ. ಅದರ ಅನುಭವಿಸಿಕೆ, ಪಡ್ಯಕೆ ಬರೇ ಒಳ್ಳ ಮನ್ಸ್ ಮಾತ್ರ ಸಾಕ್. ಅದರ ಪಳ್‌ಗ್‌ಸಿಗೆ ಅವಂದ ಅಸಾಧ್ಯ. ಅಂತಾ ದಟ್ಟ ಕಾಡ್‌ನ ನಡುಲಿ ನಾರಾಯಣ ಒಂದ್ ಘಟ್ಟಿ ನಿರ್ದಾರಲಿ ನಿಸರ್ಗಲಿ ಒಂದಾಗಿ ನಿರೀಕ್ಷೆನ ಹೊತ್ತ್ ನಿತ್‌ಕಂಡಿತ್ತ್.

ಹೊತ್ತ್ ಬಾರೀ ಆಗಿತ್ತ್. ಸೂರ್ಯ ಮುಳ್ಗಿಕಂಡ್ ಇತ್ತ್. ಗಂಟೆನ ಹೇಳ್ರೆ ಆರ್ ಕಳ್ದಿತ್ತ್. ನಾರಾಯಣ ಕುದ್ದಕಂಡೇ ಇತ್ತ್. ಬಾಯಿಲಿ ಎಲಡ್ಕೆನೂ ಇಲ್ಲೆ, ಬೀಡಿನೂ ಎಳ್ತ್‌ಲೆ. ಅವಂಗೆ ಗೊತ್ತಿತ್ತ್. ಕಾಡ್‌ನ ರೀತಿ, ನೀತಿ. ತಟಸ್ಥ ಆಗಿಯೇ ಕುದ್ದಿತ್ತ್. ಕಾಲ್‌ನ ಬೊಳ್ಳಿ ಒಮ್ಮೆ ಎಳ್ದಾಂಗ್ ಆತ್. ಆತನ ಮನ್ಸ್‌ಗೆ ಬಂದದ್ ಆ ಕ್ಷಣಕ್ಕೆ ಎಲ್ಲಿಯೋ ದೊಡ್ಡ ಕೆಂಪ ಬಂದಿರೊಕೂಂತ. ಅವನ ನರನಾಡಿಗ ಎಲ್ಲಾನೂ ಒಮ್ಮೆನೇ ಸಿದ್ದ ಆಗಿದ್ದೊ. ಅವನ ಕಣ್ಣ್‌ಲಿ ಈಗ ಬೊಳ್ಪಿತ್ತ್. ಅದ್ ಕತ್ತಲೆಲಿನೂ ಕಾಂಬಂತ ಶಕ್ತಿ ಹೊಂದಿತ್ತ್. ಯಾವುದೋ ಕ್ಷೀಣ ಶಬ್ದ, ಕೇಳಿನೂ ಕೇಳದಾಂಗೆ, ಬಾರೀ ಸಣ್ಣದ್. ಕೆಂಪ ಹೆಜ್ಜೆ ಹಿಸಿರೆ ಗೊತ್ತೇ ಆದುಲೆ. ಅದರ ಕಣ್ಣ್‌ಲಿ ಕಂಡೇ ಗೊತ್ತಾಕು, ಕೆಲವು ಪ್ರಾಣಿಗಳ ನಡಿಗೆಗ ಒಂದೊಂದ್ ರೀತಿ. ಕೆಲವು ಕಾಲ್‌ನ ಎಳ್ದ್ ನಡಿದು ಆಗ ದರ್ಗ್ ಜಾರ್ದೆ. ಕೆಲವು ಪ್ರಾಣಿಗ ಕಾಲ್‌ನ ಎತ್ತಿ ಎತ್ತಿ ಹಿಸಿವೆ. ಅವು ನಡಿವ ಶಬ್ದ ತುಂಬಾ ಕ್ಷೀಣ. ಹಂದಿಗ ನಡ್ಯಕನ ದರ್ಗ ಶಬ್ದ ಮಾಡ್ದೆ, ಕೆಂಪಗ, ಸಾರೆಂಗಗ, ನಡಿಯಕನ ಸಣ್ಣ ಬರೇ ಸಣ್ಣ ಟಕ್....ಟಕ್...ಶಬ್ದ ಕೇಳ್ದೆ. ಆದರೆ ಕಾಡ್‌ಲಿ ಹುಲಿಗ, ಚಿರತೆಗ ನಡಿದು ಗೊತ್ತೇ ಆದುಲೆ. ಅವರ ಪಾದಗ ಎಷ್ಟ್ ಮೆತ್ತಂಗೆ ಸೂಕ್ಷ್ಮಾಂತ ಹೇಳ್ರೆ ಅದರ ಊಹಿಸಿಕೆ ಸಾಧ್ಯ ಇಲ್ಲೆ. ಅಷ್ಟ್ ಸೂಕ್ಷ್ಮ ಅವರ ಹೆಜ್ಜೆಗ ಇದ್ದವೆ. ಆಗ ಹಾಂಗೆನೇ ಆಗಿ ಹೋಗಿತ್ತ್.

ಕಾಲ್‌ನ ಬೊಳ್ಳಿ ಎಳ್ದಾಂಗೆ ಆತ್. ಗಿಡ್ಡೆ ಬುಡಂದಲೇ ನಾರಾಯಣ ನೋಡಿಕಂಡಿತ್ತ್. ಅವಂಗೆ ಏನೂ ಗೊತ್ತಾತ್ಲೆ. ಆದರೆ ಹುಟ್ಟಿ ಇನ್ನೂ ಹತ್ತ್ ದಿನ ಆದ ಆ ಕೆಂಪದ ಮರಿಗೆ ಗೊತ್ತಾಗಿತ್ತ್. ಯಾವುದೋ ಅಪಾಯ ಮುಂದೆ ಉಟ್ಟೊಂತ. ಅದರ ಎಳ್ದಾಟ ಬಾರದಿರುವ ಸ್ವರ ಯಾಕೋ ನಾರಾಯಣಂಗೆ ಸಂಶಯ ತಾತ್. ಆಗ ಒಂದ್ ಅಪೂರ್ವ ದೃಶ್ಯ ನಾರಾಯಣಂಗೆ ಕಂಡತ್. ಮೈನ ನರನಾಡಿನ ಸ್ಥಬ್ದ ಆದಾಂಗೆ ಆತ್. ಜೀವನನೇ ಮುಗ್ದ್ ಹೋತ್‌ಂತ ಕೆಂಪದ ಮರಿ ಕಿರ್ಚಿಕೆ ಸುರುಮಾಡ್ತ್. ಆಗ ಸ್ವಲ್ಪ ಆಚೆ, ಬಟ್ಟಂಗಾಯಿ ದಾರಿಂದ

ಆಚೆಗೆ ಮುಂಡಿ ಕೆಂಪ ಜೀವನೇ ಮುಗ್ದ ರೀತಿಲಿ ಭ್ರೇಂಂಂಂಕ್...ಭ್ರೇಂಂಂಂಕ್ ಕಿರ್ಚುದ್ ಕೇಳ್ತ್. ಆ ಜಾಗೆ ಒಂದ್ ಜೀವಬಂದಾಂಗೆ ಬದಲಾಗಿತ್ತ್.

ಎದ್ರ್‌ನ ದೃಷ್ಟಿಗೆ ಒಂದ್ ಸಣ್ಣ ಆಹಾರ ಆಗಿ ಕೆಂಪದ ಮರಿ ಕಂಡ್ ಕಂಡ್ ಇತ್ತ್ ಆ ಸದೃಡ ಗಂಡ್ ಹುಲಿಗೆ, ಅದ್ಕೆ ಈಗ ಯಾವುದೂ ಬೇರೆ ಗೋಚರ ಇತ್ಲೆ. ಕೆಂಪ ಮರ್ಡುದೂ ಅದರ ಕೆಬಿಗೆ ಕೇಳ್ದಂಗೆ ಇತ್ಲೆ. ಯಾಕೇಂತ ಹೇಳ್ರೆ ಅದರ ಕಣ್ಣ್‌ನ ಎದ್‌ರ್ ಬೇಟೆ ಇತ್ತ್. ಅದರ ಹೊಟ್ಟೆಗೆ ಆಹಾರ್ ಇತ್ತ್. ಅದರ ಗಮನ ಪೂರ ಅದರ ಮೇಲೆ ಇತ್ತ್. ಬೇಟೆ ದೊಡ್ಡದಿರ್ಲಿ, ಸಣ್ಣದಿರ್ಲಿ, ಅದ್ ಬೇಟೆನ ಹಿಡಿವ ರೀತಿ ಒಂದೇ ಇತ್ತ್. ಅದ್ ಅದರ ಜೀವಿತಂದ ಕಲ್ತ್‌ಬಂದದ್. ಎದರ್ಲಿ ಇರ್ವ ಬೇಟೆ ಯಾವ ಅಸಾಹಯಕ ಸ್ಥಿತಿಲಿ ಉಟ್ಟೋ ಅದ್ಕೇ ಗೊತ್ತಿತ್ಲೆ. ಅದ್, ಅದ್ ಕಲ್ತ ಬೇಟೆನ ರೀತಿಲೇ ಒಂದೊಂದ್ ಹೆಜ್ಜೆನನೂ ಎಷ್ಟ್ ಸಾಧ್ಯನೊ ಅಷ್ಟ್ ಮೆತ್ತಂಗೆ ಹಿಸಿಕಂಡ್ ಒಂದೊಂದು ಹೆಜ್ಜೆನನೂ ಕಣ್ಣಾಗಿಸಿಕಂಡ್ ಮುಂದೆ ಬರ್ತಾ ಇತ್ತ್.

ನಾರಾಯಣಂಗೆ ಎಲ್ಲಾ ಒಂದ್ ಸರ್ತಿ ಹೆಚ್ಚ್‌ಕಡಿಮೆ ಆಗಿತ್ತ್. ಕಣ್ಣ್‌ನೆದುರ್ ಬೇರೆ ಯಾವ ಗಮನನೂ ಇಲ್ಲದೆ ಹುಲಿ ಸಾರಿಕಂಡ್ ಬರ್ತಿತ್ತ್. ಒಂದ್ ಸರ್ತಿ ಜೀವನೇ ಹೋದಾಂಗೆ ಆಗಿತ್ತ್. ಹುಲಿ ಮನ್ಸ್‌ಮಾಡಿ ಎರಡ್ ಕುತ್ತ್ ತೆಗ್ದ್ ಹಾರಿರೆ ನಾರಾಯಣನ ಹಕ್ಕಲೆ ಮುಟ್ಟುವಷ್ಟು ಹಕ್ಕಲೆ ಅದಿತ್ತ್. ನಾರಾಯಣ ತಲೆಲಿ ಒಮ್ಮೆಗೇ ನೂರಾರ್ ಯೋಚನೆಗ ಬಾತ್. ತುಂಬ್ಸಿದ ಬೆಡಿಲಿ ಇದ್ದದ್ ಬರೇ ಚಿಲ್ಲ್ ಒಂದೆರ್ಡ್ ಎಲ್.ಜಿ. ಮಾತ್ರ. ಕೆಂಪ ಹೊಡ್ಯಕೇಂತ ಬಂದವ ಇಂತದರ ನಿರೀಕ್ಷೆನೇ ಮಾಡ್ತ್‌ಲೆ. ಇಲ್ಲೆ ಇನ್ನ್ ಯೋಚನೆ ಮಾಡಿಕೆ ಅವಕಾಶನೇ ಇಲ್ಲೆ. ಶಬ್ದ ಬಾರದಾಂಗೆ ಕುದುರೆನ ಎಳ್ದ್ ಸ್ವಲ್ಪ ಓರೆ ಆದರೂ ಎದ್ರ್‌ಗೆ ಬಂದ್ ಕಂಡ್ ಇದ್ದ ಹುಲಿನ ಕೈಪಾರಿಕೆಂದ ಈಚೆ ಕುತ್ತಿಗೆಂದ ಕೆಳಗೆ ಸೀದಾ ಎದೆಗೇ ಗುರಿ ನೋಡಿ ಕಳ್ಳನ ಎಳ್ತ್. ಢಾಂ....

ಇಡೀ ಬಟ್ಟಂಗಾಯಿ ಕಾಡೇ ನಡ್ಗಿದಂಗೆ ಆತ್. ಪೆಟ್ಟ್ ತಾಂಗಿದ ಹುಲಿನ ಅರ್ಭಟೆಗೆ ಕಾಡ್‌ಗೆ ಕಾಡೇ ಅದ್‌ರ್‌ದಾಂಗೆ ಆತ್. ಏನಾತ್‌ಂತ ನೋಡಿಕೆ ಸಾಧ್ಯ ಇಲ್ಲೆ. ಕಾಲ್‌ಲಿದ್ದ ಬೊಳ್ಳಿನ ಬಿಚ್ಚಿದವನೇ ಬೆಡಿ ಸಮೇತ ಕುರೆನಾಂಗೆ ಗಬ್ಬಲ್ ಮರದ ಹತ್ತಿತ್. ಕೈಕಾಲ್ ದರ್ಪ್‌ತ್ತಿತ್ತ್. ಅಂದರೂ ಕ್ಷಣಮಾತ್ರಲಿ ಅವ ಗಬ್ಬಲ್ ಮರದ ಕೊಡಿಲಿತ್ತ್.

ಹತ್ತ್ ದಿನ ಹಿಂದೆ ಹುಟ್ಟಿದ ಆ ಕೆಂಪದ ಮರಿ ಬೊದ್ಕಿಕಾಗಿ ಹೇಂಗೆ ಹೋರಾಟ ಮಾಡ್ತಿತ್ತೊ. ಅದರ ಹತ್ತ್ ಪಾಲ್ ಜಾಸ್ತಿಲಿ ನಾರಾಯಣ ಇತ್ತ್. ಕೈಕಾಲ್ ನಡ್ಗಿಕಂಡ್ ಇದ್ದರೂ ಗಬ್ಬಲ್ ಮರದ ಆ ಅಡ್ಡ ಗೆಲ್ಲ್‌ಲಿ ನಿತ್ತವನೇ

ಅವನ ಬೆಡಿನ ತುಂಬ್ಸಿತ್. ಅವನ ಜೀವಮಾನಲೇ ಅಷ್ಟೇಬೇಗ ಕೇಪುನ ಬೆಡಿನ ತುಂಬಿಸಿರಿಕಿಲೆ. ಎಷ್ಟ್ ಮೊದ್ದ್ ತುಂಬ್ಸಿತೋ.. ಎಷ್ಟ್ ಎಲ್.ಜಿ. ತುಂಬಿತೋ.. ಯಾವ ಲೆಕ್ಕನೂ ಈಗ ಇತ್ಲೆ. ಇದ್ದ ಲೆಕ್ಕ ಒಂದೇ. ಬೊದ್ಕಿ ಉಳ್ದರೆ ಸಾಕ್, ಇಂತಾ ಹತ್ತ್ ಹುಲಿಗಳ ಹೊಡಿವೇಂತ ಮನ್ಸ್‌ಲೇ ನೆನ್ಸ್‌ಕಂಡತ್. ಎಂತಾ ಕಾಲ ಅದ್.

ಮರದ ಮೇಲೆ ನಿತ್ತವಂಗೆ ನಾ ಈಗ ಸುರಕ್ಷಿತಾಂತ ಕಂಡತ್. ಹಾಂಗೇ ನೆನ್ಸಿಕಂಡತ್. ಅಲ್ಲಿಂದಳೇ ಗುಂಡ್ ಹೊಡ್ದ ಜಾಗೆ ಕಡೆಗೆ ಕಣ್ಣ್ ಹಾಕಿತ್. ಕುರ್ಚಲ್ ದೆಯ್ಗಿ ಎದೆಮುಟ್ಟ ಇದ್ದೊ. ಅದರ ನಡುಲಿ ಒಂದ್ ಜಿಗ್ಗ್ ಗಿಡ್ಡೆ. ಎಂತದೂ ಕಾಣ್ತಿತ್ತ್‌ಲೆ. ಇಡೀ ಗಿಡ್ಡೆ ದೆವ್ವ ಹಿಡ್ದವರಾಂಗೆ ನಡ್ಗ್‌ತಿತ್ತ್. ಹ್ರೂಂ....ಮ್.... ಸಣ್ಣದನಿ, ದೀರ್ಘ ನಿಟ್ಟುಸಿರ್ ಇಡೀ ಕಾಡ್‌ಲಿ ಅದೊಂದೇ ಶಬ್ದ. ನಾರಾಯಣ ಒಮ್ಮೆಗೆ ನಂಬಿತೇ ಇಲ್ಲೆ. ಕೆಂಪಕ್ಕೆ ತುಂಬ್ಸಿದ ಈಡ್‌ಲಿ ಹುಲಿಗೆ ಹೊಡ್ದಿತ್ತ್. ಅದ್ ಬರೇ ಅವನ ಜೀವ ಭಯಕ್ಕೆ ಮಾತ್ರ. ತುಂಬ್ಸಿದ ಬೆಡಿ ಇತ್ತ್. ಹುಲಿ ಬಿದ್ದ ಜಾಗೆ ನಡ್ಗಿಕಂಡ್ ಇತ್ತ್. ಇನ್ನ್ ಯಾವ ತೀರ್ಮಾನನೂ ಬೇಕಿತ್ಲೆ. ಒಂದ್ ಸಾಧಾರಣ ಅಂದಾಜ್ ಮಾಡಿ ಹೊಡ್ತ್ ಮತ್ತೊಂದ್ ಗುಂಡ್. ಇಡೀ ಕಾಡೇ ಸ್ತಬ್ದ ಆಗಿತ್ತ್. ಆಗಳೇ ಕತ್ತಲೋ ಕತ್ತಲೆ ಆಗ್ತಿತ್ತ್.

****

ಹಿಂಬತ್‌ನ ಚಾ ಕುಡ್ದ್ ಉಳ್ದ ಮಡ್ಲ್‌ನ ತಟ್ಟಿ ಮೆಡ್ಕಂಡ್ ಇದ್ದ ಚೆನಿಯಣ್ಣ ಒಮ್ಮೆ ಹದ್ಕಿಬಿದ್ದೊ. ಅವರ ಬೆಡಿನ ಗುಂಡ್‌ನೊಟ್ಟೊಟ್ಟಿಗೇ ಕೇಳಿತ್ತ್ ಭೀಕರ ಹುಲಿನ ಘರ್ಜನೆ. ಅಂತಿಂತ ಶಬ್ದ ಅದಲ್ಲ. ಮಾರಣಾಂತಿಕ ಪೆಟ್ಟ್ ತಿಂದ ರೋಶಾದ್ವೇಷಲಿ ಹೊರ್ಟ ಭೀಕರ ಘರ್ಜನೆ. ಅದರ ಬರ್ಯಕೆ ಆಕಿಲೆ, ಅನುಭವಿಸಿದಂವ್ಕೆ ಗೊತ್ತ್. ಅದರ ಭೀಕರತೆ ಏನೂಂತ. ಕ್ಷಣ ಕಾಲ ಯಾವುದೂ ಗೊತ್ತಿಲ್ಲದಾಂಗೇ ಆಗಿತ್ತ್ ಚನಿಯಣ್ಣಂಗೆ. ನಾರಾಯಣನ ತಮ್ಮನ ಕಾಲ್ ನಿತ್ತಲ್ಲೇ ನಡ್ಗ್‌ತಿತ್ತ್. ಏನ್ ಮಾಡ್ದು. ಏನ್ ಆಗಿರ್ದು. ಮನೆಲಿ ಬೇರೆ ಬೆಡಿ ಇತ್ಲೆ. ಕಟ್ಟಿ ಹಿಸಿದ ಸೂಟೆ ಇತ್ತ್. ನೀರಡಿ ಕಿಚ್ಚಿಂದ ಸೂಟೆಗೆ ಕಿಚ್ಚಿಕೊಟ್ಟವನೇ ಕೂಕ್‌ಳ್ ಹಾಕಿಕಂಡ್ ದಾರಿ ಹತ್ತಿಕಂಡ್ ಕಾಡ್‌ಗೆ ಓಡ್ತ್. ಆಗ ಸರಿ ಸುಮಾರ್ ಪೂರಾ ಕತ್ತಲೆ ಆಗಿತ್ತ್.

ಕೈಲಿ ಟಾರ್ಚ್ ಇದ್ದರೂ ಸೂಟೆ ಹೊತ್ಸಿಕಂಡ್ ಹೋಕೆ ಕಾರಣ ಇತ್ತ್. ಅಣ್ಣ ಹೊಡ್ದ ಗುಂಡ್ ಹುಲಿಗೇಂತ ಗೊತ್ತಾಗಿತ್ತ್. ಕಾಡ್ ಪ್ರಾಣಿಗ ಕಿಚ್ಚಿಗೆ ಹೆದ್ರ್‌ವೆ. ಒಂದು ವೇಳೆ ಪೆಟ್ಟಾದ ಹುಲಿ ಎಲ್ಲಿಯಾರ್ ಎದ್ರ್ ಆದರೆ ಕಿಚ್ಚಿಗಾರ್ ಹೆದುರ್ದೂಂತ ಅವ ಸೂಟೆ ಹೊತ್ಸಿಕಂಡದ್. ಸುಮಾರ್ ಅರ್ದದಾರಿ ಬಂದಾಕನ

ಅಣ್ಣಂಗೆ ಕೂಕ್ಳ್ ಹಾಕಿತ್. ಅತ್ತಂದ ಅದ್ಕೆ ಉತ್ತರ ಬಾತ್. ನಾರಾಯಣನ ತಮ್ಮಂಗೆ ಜೀವ ಬಂದಾಂಗೆ ಆತ್. ಅಣ್ಣಂಗೆ ಏನ್ ಆತ್ಲೆ. ಹೆದ್ರುದು ಏನೂ ಇಲ್ಲೇಂತ ಗೊತ್ತಾಕನ ಅವನ ನಡಿಗೆನೂ ನಿಧಾನ ಆಗಿತ್.

ನಾರಾಯಣಂಗೆ ಎರಡನೆ ಗುಂಡ್ ಹೊಡ್ದಾಕನ ಗೊತ್ತಾಗಿ ಹೋಗಿತ್ತ್ ಹುಲಿ ಬದ್ಕಿರಿಕಿಲೆಂತ. ಮರಲೇ ನಿತ್ತ್ ಮತ್ತೊಮ್ಮೆ ಬೆಡಿ ತುಂಬ್ಸಿ ಮರಂದ ಕೆಳಗಿಳ್ತ್. ಅವನ ಕಣ್ಣಿಗೆ ಪೂರಾ ಕತ್ತಲೆ ಆಗಿತ್ಲೆ. ಆ ಬೊಳ್ಪುಗೆ ಅವನ ಕಣ್ಣ್ ಹೊಂದಿಕಂಡಿತ್ತ್. ಸ್ವಲ್ಪ ಹೊತ್ತ್ ಮರದ ಬುಡಲೇ ನಿತ್ತ್ ನೋಡ್ತ್. ಪೂರಾ ಹಕ್ಕಲೆ ಹೋಕೇನೂ ಧೈರ್ಯ ಬಾತ್ಲೆ. ಇದೆಲ್ಲ ಗಲಾಟೆನ ನಡುಲಿ ಆ ಕೆಂಪದ ಮರಿ ಅಲ್ಲಿತ್ಲೆ. ಕುತ್ತಿಗೆಗೆ ಕಟ್ಟಿಕಂಡಿದ್ದ ಆ ಉದ್ದದ ಬೊಳ್ಳಿನ ಎಳ್ಕಂಡ್ ಅದರ ಅಮ್ಮ ಮರ್ಪ ಕಡೆಗೆ ಇದ್ದ ಎಲ್ಲಾ ಶಕ್ತಿನ ಒಟ್ಟಿಗೆ ಸೇರ್ಸಿ ಓಡಿಯಾಗಿತ್ತ್. ಅದ್ಕೆ ಗೊತ್ತಿತ್ತ್. ಅಮ್ಮ ಎಲ್ಯುಟ್ಟುಂತಾ. ಅಮ್ಮನ ಮೂರಿ ಅದ್ಕೆ ಬಂದ್ ತುಂಬಾ ಸಮಯ ಆಗಿತ್ತ್. ಕೆಂಪದ ಮರಿ ಜೀವನದ ಒಂದ್ ಮಹಾ ಅಪಾಯಂದ ಪಾರಾಗಿತ್ತ್. ಅಷ್ಟರ್ಲಿ ದೂರಂದ ದಾರಿಲಿ ಒಂದ್ ಸೂಟೆಕಂಡತ್. ಒಟ್ಟೊಟ್ಟಿಗೇ ತಮ್ಮನ ಕೂಕ್ಳ್ ಕೇಳ್ತ್. ಅವಂಗೆ ಉತ್ತರಿಸಿದವ ಅವ ಬಂದ ಮೇಲೆನೇ ಅದರ ನೋಡ್ತೂಂತ ಹಾಂಗೇ ನಿತ್ತಕಂಡತ್. ತಮ್ಮ ಬಂದಮೇಲೆ ಒಂದ್ ನಾಲ್ಕಡಿ ಉದ್ದದ ಕೋಲ್‌ನ ಕಡ್ಡ್ ಅದರ ಕೊಡಿಗೆ ಸೂಟೆನ ಸಿಕ್ಸಿದ ನಾರಾಯಣ ಅದರ ತಮ್ಮಂಗೆ ಕೊಟ್ಟತ್. ಅವರ್‌ಂದ ಕಿಚ್ಚಿ ಹೊತ್ತ್‌ಕಂಡ್ ಇದ್ದ ಸೂಟೆ ಸುಮಾರ್ ಆರಡಿ ಮುಂದೆ ಇತ್ತ್. ಸೂಟೆ ಹಿಡ್ಕಂಡಿದ್ದ ತಮ್ಮನೊಟ್ಟಿಗೆ ಬೆಡಿನ ಒಂಬಿಸಿಕಂಡ ನಾರಾಯಣ ಇತ್ತ್. ಎಲ್ಲಿಯಾರ್ ಹುಲಿ ಜೀವಲಿದ್ದ್ ಸಾಯುವ ಕಾಲಲಿ ಕಡೇ ದಾಳಿ ಮಾಡಿರೆಂತ ಸೂಟೆನ ಅಷ್ಟ್ ಮುಂದೆ ಬಾವಾಂಗೆ ಹಿಡ್ದ್ ಜಾಗ್ರತೆಲಿ ಕೆಳಗಿಳ್ದೊ. ಹುಲಿ ಎಲ್ಲಿ ಬಿದ್ದಿರ್ದುಂತ ನಾರಾಯಣ ತಿಳ್ಕಂಡಿತ್ತೊ ಈಗ ಆ ಜಾಗೆನ ಮೇಲೆನೇ ಸೂಟೆ ಅಲ್ಲಾಡಿಕಂಡಿತ್ತ್. ಇಲ್ಲೆ ಯಾವ ಪ್ರತಿಕ್ರಿಯೆನೂ ಇತ್ಲೆ. ಅಂದರೆ ಹುಲಿ ಜೀವಲಿ ಇಲ್ಲೆ. ಈಗ ಹೆದ್ರಿಕೆ ಇತ್ಲೆ. ಸೀದಾ ಧೈರ್ಯಲಿ ಆ ಗಿಡ್ಡೆ ಹಕ್ಕಲೆ ಹೋದೊ. ಆಗ ಕಂಡತ್ ಆ ಹುಲಿ. ಅದ್ ಸತ್ತ್ ಸ್ವಲ್ಪ ಹೊತ್ತೇ ಆಗಿತ್ತ್. ಅದೊಂದ್ ಸಾಧಾರಣ ಮೈಕಟ್ಟ್‌ನ ಯವ್ವನಸ್ತ ಗಂಡ್ ಹುಲಿ. ಸತ್ತ ಪ್ರಾಣಿಗಳ ಮೈಲಿ ಪೀಡೆ ಇದ್ದದೆಂತ ಬೇಟೆಗಾರರ ನಂಬಿಕೆ. ಅಂತ ಪ್ರಾಣಿನ ಮುಟ್ಟಿದ ತಕ್ಷಣ ಅದ್ ಮುಟ್ಟಿದವರ ಮೇಲೆ ಸೇರಿಕಂಡದೇಂತ ಹೇಳಿಕೆ. ಹಾಂಗಾಗಿ ದೊಡ್ಡ ಬೇಟೆ ಆಕನ ಅದರ ಮುಟ್ಟಿಕೆ ಮುಂದೆ ಬೆಡಿನ ಅದ್ಕೆ ಮುಟ್ಟುಸುದು ಒಂದ್ ಕ್ರಮ ಬೆಡಿ ಮುಟ್ಟಿದ ತಕ್ಷಣ ಪೀಡೆ ಅದಂರ್ದ ಬುಟ್ಟದೇಂತ ಎಲ್ಲವೂ ಹೇಳ್ವೆ,

ನಾರಾಯಣನೂ ಹಾಂಗೇ ಮಾಡ್ತ್. ಹುಲಿನ ಮುಟ್ಟುವ ಸಂತೋಷಲಿ ನಾರಾಯಣನ ತಮ್ಮ ಅದರ ಮುಟ್ಟಿತ್. ಅಷ್ಟೊತ್ತಿಗೇ ಬಡ್ಡಡ್ಕಲಿ ಬಾಬಣ್ಣಣ್ಣ ಹೇಳ್ತಿದ್ದ ಮಾತ್ ನೆನ್ಪಾತ್. ಹುಲಿನ ಮೀಸೆಲಿ ವಿಷ ಇದ್ದದೇಂತ. ಕೂಡ್ಲೆ ತಮ್ಮನಕ್ಕಲೆ ಮೀಸೆ ಮುಟ್ಟ್‌ಬಡ ಮಾರಾಯಂತ ನಾರಾಯಣ ಜಾಗ್ರತೆ ಮಾಡಿಕಂಡತ್. ಅವ ಹೊಡ್ದ ಸುರೂನ ಗುಂಡ್ ಅವ ನೆನ್ಸಿದಲ್ಲಿಗೇ ಬಿದ್ದಿತ್ತ್. ಎರ್ಡನೆದ್ ಹೊಟ್ಟೆಯೊಳಗಾಗಿ ಬೆನ್ನ್‌ಲಿ ಹೊರ್ಟಿತ್ತ್. ಸುರೂನ ಗುಂಡೇ ಮರ್ಮಕ್ಕೆ ಬಿದ್ದಕಾರಣ ಅದರ್ಲೇ ಹುಲಿ ಸತ್ತಿತ್. ಆ ಕೆಂಪಕ್ಕೆ ತುಂಬಿಸಿದ್ದ ಚಿಲ್ಲ್‌ನ ಈಡ್‌ಗೆ ಹುಲಿ ಆದ ಕಾರಣ ಬಿದ್ದಿತ್ತ್. ಒಂದುವೇಳೆ ಹಂದಿಗೆ ಆಗಿದ್ದರೆ ಅದರ ಸೆಳ್ಳಿನ ದಾಟಿ ಒಳಗೇ ಹೊಕ್ಕಿಕಿತ್ಲೆ. ಆದರೆ ಹುಲಿನ ಚರ್ಮ ತೆಳ್ಳಂಗೆ, ಮೆತ್ತಂಗೆ, ಚರ್ಮದಾಟಿದ ಚಿಲ್ಲ್‌ಗ ಸೀದಾ ಮರ್ಮಕ್ಕೇ ಮುಟ್ಟಿತ್ತ್. ಚಿಲ್ಲ್‌ನ ಈಡಾದರೂ ಒಂದೆರಡು L.G. ಹಾಕಿತ್ತ್. ಹುಲಿನ ಕಂಡ ನಾರಾಯಣಂಗೆ ಸುಮಾರ್ ಹೊತ್ತ್ ಮಾತೇ ಬಾತ್ಲೆ. ಒಂದ್ ಕಡೆ ಹುಲಿ ಹೊಡ್ದ ಸಂತೋಷ, ಇನ್ನೊಂದೆಡೆ ಎರ್ಡ್ ಗುಂಡ್‌ಗ, ಹುಲಿನ ಆರ್ಭಟೆ ಬಟ್ಟಂಗಾಯಿ, ಬಟ್ಟಂಗಾಯಿಗೇ ಕೇಳಿರ್ದು. ಏನ್ ಮಾಡ್ತೂಂತಳೇ ಗೊತ್ತಾತ್ಲೆ. ಒಂದ್ ರೀತಿಲಿ ಅವ ಪೂರಾ ಹೆದ್‌ರ್ದ್ ಈಗಳೇ. ಯಾವ ತೀರ್ಮಾನ ತೆಕಂಬೊದೂಂತ ಗೊತ್ತಾಗದೇ ಅಣ್ಣ ತಮ್ಮ ಇಬ್ಬರೂ ಹುಲಿನ ಅಲ್ಲಿಯೇ ಬುಟ್ಟ್ ಸೀದಾ ಮನೆಕಡೆಗೆ ಇಳ್ದೊ.

ಅಂಗಳ ಮೂಲೆಲಿ ಚೆನಿಯಣ್ಣ ಕಾದ್ ಕಂಡೇ ಇದ್ದೊ. ನಡ್ಡ ಸಂಗತಿ ನಾರಾಯಣ ಹೇಳಿಕಾನ ಚೆನಿಯಣ್ಣನ ದೊಂಡೆ ಪಸೆ ಆರಿಹೋಗಿತ್ತ್. ಕೈ ಕಾಲ್, ತೊಳ್ದ್ ಚಾಯ ಕುಡ್ದ ನಾರಾಯಣ ಏನೇ ಆಗಲಿ ಒಮ್ಮೆ ಮೀಂದ್‌ಕಣೆಂತ ನೀರಡಿಗೆ ಹೋತ್. ಅವ ಇನ್ನೂ ಮೀಯಕೆ ಇಳ್ತ್‌ಲೆ. ಅಷ್ಟರ್ಲಿ ದೊಡ್ಡ ಮಾವಿನ ಮರದ ಕೆಳಗೆ ದಾರಿಲಿ ಯಾರೋ ಲೈಟ್ ಹಾಕಿಕಂಡ್ ಬಾದು ಕಂಡತ್. ನಾರಾಯಣನ ಪೆರಿಜೀವನೇ ರಟ್ಟಿದಾಂಗೆ ಆತ್. ಬಿಚ್ಚಿದ ಅಂಗಿನ ಕೋಸಿಕಂಡವನೇ ಸೀದಾ ಮನೆ ಒಳಗೆ ಬಂದ್ ಪಿಸಿಪಿಸಿಂತ ಅಪ್ಪನಕ್ಕಲೆ ಹೇಳ್ತ್."ಯಾರೋ ಬಂದ್‌ಕಂಡ್ ಒಳೊ.. ನಾ ತೋಟಲಿ ಹೋಗಿ ಕುದ್ದ್‌ಕಣೆ ಬಂದವ್ ಯಾರೇ ಆದರೂ, ನಾ ಬೊಳ್ಪುಗೇ ಬಡ್ಡಡ್ಕಕ್ಕೆ ಹೋಗಳೇಂತ ಹೇಳಿ" ಅಲ್ಲಿಂದ ಓಡಿಕಂಡೇ ಮನೆ ಹಿಂದೆ ಬಾಗ್‌ಲ್‌ಲಿ ದಾಟಿ ತೋಟಕ್ಕೆ ಓಡ್ತ್. ಅಲ್ಲೇ ಒರ್ಗಿಸಿಕಂಡಿದ್ದ ಬೆಡಿನ ತೆಗ್ದ್ ನಾರಾಯಣನ ತಮ್ಮ ಅದರ ಬೆಸಗೆ ಅಡಿಗೆ ಹಿಸಿತ್.

ಉದಾಸೀನಲಿ ತಿಂಟೆಲಿ ಮಲ್ಕ್ಯಂಡಿದ್ದ ನಾಯಿಗ ಅಲ್ಲಿಂದಳೇ ಚಳ್ ಚಳ್‌ಂತ ಬೊಗ್ಳಿದೊ. ಸುಮ್ಮನಿರಿಯಾ ನಾ ಅಂತ ಹೇಳಿಕಂಡ್ ಲಿಂಗಪ್ಪ ಮನೆ ಒಳಗೆ ಬಾತ್. ಅಂಗಳ ಮೂಲೆಲಿ ತಿಂಟೆಕರೆಲಿದ್ದ ಚಾಳೆ ಹೊಂಡದೊಳಗೆ ಕುದ್ದ್‌ಕಂಡ್

ಇದ್ದ ನಾರಾಯಣ ಅಂಡ್ಡಿಗಕಂಡೇ ಅಲ್ಲಿಂದ ನೋಡ್ತಿತ್. ಬಂದವ ಲಿಂಗಪ್ಪಾಂತ ಗೊತ್ತಾತ್. ಈ ಶನಿ ಹಿಡ್ದವ ವಿಚಾರ್ಸಿಕೇ ಬಂದದ್‌ಂತ ಗೊತ್ತಾತ್. ಎಲ್ಲಿ ಮನೆವು ಹೇಳಿಬುಟ್ಟವೆನೋಂತ ಹೆದ್ರಿಕೆ ಆಕಂಡಿತ್. ಅವಂಗೆ ಅಲ್ಲಿನ ಮಾತ್ ಕೇಳ್ತಿತ್. ಅವನ ಹೆದ್ರಿಕೆ ಎಲ್ಲಾ ನಿಲ್ಲುವಾಂಗೆ ಚೆನಿಯಣ್ಣ ಲಿಂಗಪ್ಪನಕ್ಕಲೆ ಕೇಳ್ದೋ " ಎಂತದಕ್ಕೆ ಗುಂಡ್ ಹೊಡ್ದ ಮಾರಾಯ, ಎರ್ಡ್ ಗುಂಡ್ ಒಟ್ಟೊಟ್ಟಿಗೇ ಕೇಳ್ತ್, ಹುಲಿ ಮರ್ಡುದೂ ಕೇಳ್ತ್" ಅವರ ಪ್ರಶ್ನೆ ಲಿಂಗಪ್ಪಂಗೇ, ಬಾಕನ ಯಾವುದೋ ಕುತೂಹಲ ನಿರೀಕ್ಷೆಲಿ ಬಂದವಂಗೆ ನಿರಾಶೆ ಆದಂಗೆ ಆತ್. " ಇಲ್ಲೆ ಮಾವ ನಾ ಹೊಡ್ದದ್ ಅಲ್ಲ, ನಾ ಕಾಡ್‌ಗೇ ಹೋತ್ಲೆ, ಆ ಗುಂಡ್‌ಗೆ ಹುಲಿ ಮೊರ್ಡ್‌ದ್ ಕೇಳಿಕಾನ ನಾರಾಯಣ ಹೊಡ್ತೇನೋಂತ ನಾ ಬಂದದ್." ಅವನ ಮಾತ್ ಮುಗ್ಯಕನ "ಅವ ಬೊಳ್ಳುಗೇ ಬಡ್ಡಡ್ಕಕ್ಕೆ ಹೋಗುಟು, ದೊಡ್ಡೇರಿಗೆ ಹೋಕೂಂತ ಹೇಳಿ ಬೇಗ ಹೋತ್" ಚೆನಿಯಣ್ಣ ಸಲೀಸಾಗಿ ಹೇಳ್ದೊ. ಲಿಂಗಪ್ಪ ಏನ್ ಸಾಮಾನ್ಯದವ ಅಲ್ಲ. ಅವರ ಪೈಕಿಲೇ ಸಾಕಸ್ಟ್ ವಿದ್ಯಾವಂತ. ಸುಳ್ಯಲಿ ಬೋರ್ಡಿಂಗ್‌ಲಿ ಇದ್ದ್ ಶಾಲೆಗೆ ಹೋದವ. ಇದೇ ಮಾತ್‌ನ ನಾರಾಯಣನೋ ಅಲ್ಲ ಇನ್ನ್ ಯಾರೋ ಹೇಳಿದ್ದರೆ ಅವ ಸುಲಭಲಿ ನಂಬಿಕಿತ್ಲೆ. ಆದರೆ ಹೇಳ್ದ್ ಚನಿಯ ಮಾವ. ಒಂದ್ ರೀತಿಲಿ ತುಂಬಾ ಮುಗ್ಧ ಮತ್ತು ಪಾಪದ ಜನ. ಅಂದರೂ ಸಣ್ಣ ಸಂಶಯ ಇತ್ತೇ ಇತ್. ಅತ್ತ ಇತ್ತ ನೋಡ್ದವ ಬೆಡಿ ಹಿಸುವ ಜಾಗೆನತ್ತ ನೋಡ್ತ್. ಬೆಸಗೆ ಅಡಿಗೆ ಕಟ್ಟಿದ ಬೊಳ್ಳಿಲಿ ಬೆಡಿ ನೇತಾಡ್ತ ಇತ್. ಅದರ ನೋಡಿಕಾನ ಅದ್ ಈಗ ಗಂಟೆಗಳ ಹಿಂದೆ ಹುಲಿ ಹೊಡ್ದ ಬೆಡೀಂತ ಕಾಣ್ತಿತ್ಲೆ. ಒಂದ್ ಕುದೆಂಟಿ ತುಂಡ್‌ನಾಂಗೆ ನೇತಾಡಿಕಂಡ್ ಇತ್. ಅದ್ ಇದ್ ಮಾತಾಡಿ ಕಡೆಗೆ "ಯಾರ್ ಹೊಡ್ದಿರ್ದೋ ಅಂದರೆ" ಮತ್ತೆನೂ ಒಂದು ಸಣ್ಣ ಸಂಶಯ. ಅದ್ಕೂ ಉತ್ತರ ಇತ್ ಚೆನಿಯಣ್ಣನಕ್ಕಲೆ. "ಹೌದು ಕಲ್ಕರೆಯವರ ಪೈಕಿನೋ... ಕೋಡತ್ತ್‌ನವರ ಕಡೆವೋ ಯಾರೋ ಕಾಡ್ ಹತ್ತಿಕಂಡ್ ಹೋಕಂಡಿದ್ದೊಗಡ, ಅವು ಬಂದರೆ ಹಾಂಗೇನೇ, ಸುಮಾರ್ ಜನ ಇದ್ದೊ ಗಡ" ಚೆನಿಯಣ್ಣ ಮಾತ್ ಮುಗ್ಸಿದೊ. ಕಲ್ಕರೆವೋ, ಕೋಡತ್ತ್‌ನವೋ ದೊಡ್ಡ ದೊಡ್ಡ ಧನಿಗ, ಅವು ಯಾರೂ ಲಿಂಗಪ್ಪನ ಬಾಯಿಗೆ ಹಿಡ್ಸವು ಅಲ್ಲ. ಅದ್ ಅವಂಗೂ ಗೊತ್ತಿತ್. ಮಾಡಿಕೇನೂ ಕೆಲ್ಸ್ ಇತ್ಲೆ. ಚಾರ್ಟ್ ತೆಕಂಡ್ "ಅಂದರೆ ನಾ ಬನ್ನೆಮಾವ"ಂತ ಹೇಳಿಕಂಡ್ ಬಾಗಿಲ್ ದಾಟಿ ಅಂಗಳಕ್ಕೆ ಇಳ್ತ್. ಅವನ ಲೈಟ್‌ನ ಬೊಳ್ಪು ದೊಡ್ಡ ಮಾವಿನ ಮರ ದಾಟುವಲ್ಲಿವರೆಗೆ ಚಾಳೆ ಹೊಂಡಲೇ ಕುದ್ದಕಂಡ್ ಇದ್ದವ ಅಲ್ಲಿಂದ ಎದ್ದ್ ಮನೆಗೆ ಬಾತ್. ಚೌಳಿಗ, ಪಿಜಿನ್‌ವ ಅವಂಗೆ ಬೇಕಾದಷ್ಟ್ ಕಚ್ಚಿದ್ದೊ.

ನಾರಾಯಣಂಗೆ ಸಮಸ್ಯೆ ಮುಗ್ದಿತ್ಲೆ. ಅದ್ ಪ್ರಾರಂಭ ಆಗಿತ್ತ್ ಅಷ್ಟೆ. ಹಿಂದೆ ಒಮ್ಮೆ ಒಬ್ಬ ಹುಲಿ ಹೊಡ್ಯೊಕೂಂತಳೇ ದೆವ್ವ ದೇವ್ರಿಗೆ ಕೈ ಮುಗ್ದ್ ಚಾಮೀ... ಇಂದ್ ಬೇಟೆಗೆ ಹೋನೆ, ನಂಗೆ ಹುಲಿ ಹೊಡ್ಯೊಕೂಂತ ಆಸೆ, ಇಂದ್ ಕಾಡ್‌ಲಿ ನನ್ನ ಎದ್ರಿಗೆ ಒಂದ್ ಹುಲಿ ಬಂದರೆ ನಿಂಗೆ ಉರ್‍ಲಿ ಒಪ್ಸಿನೇಂತ ಹರ್ಕೆ ಹೊತ್ತ್ ಕಾಡ್‌ಗೆ ಹೋತ್‌ಗಡ. ಅವನ ದೆವ್ವ ದೇವ್ರುಗ ಸಾಮಾನ್ಯ ಅಲ್ಲ. ಉರ್‍ಲಿನ ಆಸೆನೂ ಇತ್ತ್. ಅವ ಬೇಡಿಕಂಡಾಂಗೆ ಕಾಡ್‌ಲಿ ಅವನ ಎದ್ರ್ ಒಂದ್ ದೊಡ್ಡಾ ಅಡ್ಡ ಬಲಿಪ ಬಾತ್‌ಗಡ. ಹುಲಿನ ಕಂಡ ಅವಂಗೆ ಜೀವನೇ ಹೋದಾಂಗೆ ಆತ್. ಎದ್‌ರ್‍ಲಿ ಹುಲಿ ಉಟ್ಟು, ಕೈ ಕಾಲ್ ನಡ್ಗಿದೆ. ಬಾಯ್ಲಿ ಪಸೆನೇ ಇತ್ಲೆ. ಗುರಿ ಒಂಬ್ಸುದು ಹೋಗಲಿ, ಬೆಡಿ ನೇಚಿಕೆನೇ ಬಸ ಇತ್ಲೆ. ಮತ್ತೆ ಅವಂಗೆ ನೆನ್ಪಾದ್ ಅವನ ದೆವ್ವ ದೇವ್ರುಗಳೆ. ಅಲ್ಲಿಂದಳೇ ಮನ್ಸ್‌ಲಿ ಬೇಡಿಕಂಡತ್‌ಗಡ ಚಾಮಿ... ಬಂದ ಹುಲಿ ಬಂದಾಂಗೆ ಹೋದರೆ ಉರ್‍ಲಿನೊಟ್ಟಿಗೆ ಒಂದ್ ಸೆಡೆನೂ ಕೊಟ್ನೆಂತ. ಹುಲಿ ಹಾಂಗೇ ಹೋತ್ ಗಡ. ನಾರಾಯಣನ ಪರಿಸ್ಥಿತಿನೂ ಹಾಂಗೇನೇ ಇತ್ತ್. ಹುಲಿ ಹೊಡ್ಯೊಕು ಹುಲಿ ಹೊಡ್ದ್ ದೊಡ್ಡ ಬೇಟೆಗಾರಾಂತ ಹೆಸರ್ ಬರೋಕು ಇದೆಲ್ಲ ಅವನ ಆಸೆ ಆಗಿತ್ತ್. ಅದ್ ಇಂದ್ ಈಡೇರಿತ್ತ್. ಹುಲಿ ಸತ್ತ್ ಬಿದ್ದಿತ್ತ್. ಈಗೇನ್ ಮಾಡ್ದು. ನೆನ್ಸಿಕಂಡಾಗೆ ಸಮಸ್ಯೆ ಜಟಿಲ ಆಗಿ ಕಾಂಬತಿತ್ತ್. ಅಯ್ಯನಬಂಡೆ... ಎಂತದ್ ಮಾಡ್ದು... ಆ ಕ್ಷಣಲಿ ನೆನ್ಪಾದ್ ಅವಂಗೆ ಬಡ್ಡಡ್ಕ ಕುಞ್ಞಣ್ಣ. ನಿನ್ನೆ ಒಂದ್ ತರದ ಕೋಪಲಿ ಅವರ ಹಕ್ಕಲೆ ಪ್ರತಿಜ್ಞೆ ಮಾಡಿ ಹೊರ್‍ಟವ ಅವ. ಅದ್ ಅವ ನೆನ್ಸದ ರೀತಿಲಿ ಈಡೇರಿತ್ತ್. ಎಂತಾ ಅನಿರೀಕ್ಷಿತ ಘಟನೆ. ಹೌದು। ಕುಞ್ಞಣ್ಣನಲ್ಲಿಗೆ ಹೋದೇ ಈ ಸಮಸ್ಯೆಗೆ ಪರಿಹಾರ ಅದರ ವಿಷಯನ ಅಪ್ಪನ ಹಕ್ಕಲೆನೂ ಹೇಳ್ತ್. ಅವ್ಕೂ ಅದೇ ಸರಿ ಕಂಡತ್. ಇದೆಲ್ಲದರೊಟ್ಟಿಗೆ ಇನ್ನೂ ಒಂದ್ ಸಮಸ್ಯೆ ಇತ್ತ್. ಸಿಕ್ಕಿದ ಪ್ರಾಣಿಗಳ ರೋಮ ಕೆರ್ಕಿದೇ ಅವಂಗೆ ಹೆಚ್ಚ್ ಗೊತ್ತಿದ್ದದ್. ಕೆಂಪ, ಕಡೆ, ಬುಟ್ರೆ ಉಳ್ಳ ಬೊರ್‍ಕಿ, ಹಂದಿ, ಮೊಲ, ಪಾಂಜ ಎಲ್ಲದರನೂ ರೋಮ, ಮುಳ್ಳ್ ತೆಗ್ದ್ ಗೊತ್ತಿತ್ತೇ ಹೊರ್‍ತು ಅವಂಗೆ ಚರ್ಮ ಬುಡ್ಸಿ ಅಷ್ಟ್ ಅನುಭವ ಇತ್ಲೆ. ಕೆಂಪದ, ಕಡೆನ ಚರ್ಮದ ಅಗತ್ಯ ಇಲ್ಲದ ಕಾರಣ ಅದರ ಹೇಂಗಾರ್ ತೆಗ್ದ್ ಗೊತ್ತಿತ್ತೇ ಹೊರ್‍ತ್ ಸರಿಯಾಗಿ ಚರ್ಮ ಬುಡ್ಸೊಕರೆ ಎಲ್ಲಿಂದ ಕೊಯ್ಯೊಕು, ಹೇಂಗೆ ಮಾಡೋಕು ಒಂದ್ ಕೂಡಾ ಗೊತ್ತಿತ್ಲೆ. ಅಪ್ಪನೊಟ್ಟಿಗೆ ಹೇಳ್ತ್... "ನಾ ಬೇಗ ಬಡ್ಡಡ್ಕಕ್ಕೆ ಹೋಗಿ ಬನ್ನೆ. ಬಾಕನ ಅಲ್ಲಿಂದ ತಮ್ಮಂದರ ಕರ್ಕಂಡ್ ಬನ್ನೆ. ಅಲ್ಲಿವರೆಗೆ ಏನೂ ಮಾಡ್ದು ಬೇಡ" ಬೊಳ್ಪಾಕೆ ಮುಂದೆ ಎಲ್ಲಾ

ಮುಗ್ನೋಕೂಂತ ಹೇಳಿ, ಅವಸರ ಅವಸರ ಆಗಿ ಊಟ ಮಾಡಿ ಕರಿಗೂಟಿ ಕತ್ತಲೆಲೇ ಬಡ್ಡಡ್ಕಕ್ಕೆ ಹೊರ್ಟತ್. ಹೊರ್ಡುವ ಕಡೇ ಗಳಿಗೆಲಿ, ಅಂತ ಸಮಯಲಿನೂ ಅವನ ಅಡ್ಜಿಲ್ ನೆನ್ಪಾತ್, ಅಂಗಳಕೆ ಇಳ್ದವ ತಿರ್ಗಿ ನಿತ್ತ್ ತಮ್ಮನ ಹಕ್ಕಲೆ ಹೇಳ್ತ್. ಬೆಳ್ಂದ್ರೆ ತಟ್ಟ್‌ನೊರಗೆ ನೀನೂ ಬಂದ್ಯನೋ... ಅಲ್ಲಿ ಮಾಳಕ್ಕೆ ಅಡ್ಜಿಲ್ ಹಾಕ್ನ್ಯೆಳೆ, ಮತ್ತೆ ಹುಲಿಬಿದ್ದ ಜಾಗೆನ ಕರೆನ ಮಾಳಕ್ಕೂ ಅಡ್ಜಿಲ್ ಹಾಕ್ನ್ಯೆಳೆ. ನೀನೂ ಒಟ್ಟಿಗೆ ಬಂದರೆ ಅದರ ನೋಡಕ್ ನಿನ್ನೆ ಹಿಂಬತ್ ಹಾಕಿದ್. ನಿನ್ನೆ ಅದ್ ಹೊರ್ಡದಿದ್ದರೂ ಇಂದ್ ಹೊರ್ಟಿರಿಕೆ ಸಾಕ್ ಬಾವನೋ... ನಾರಾಯಣನ ಮಾತ್‌ಲಿ ಬೇಡಿಕೆ ಇತ್ತ್. ನಾರಾಯಣನ ಮಾತ್‌ನ ಬೇಡಿಕೆ ಸರಿ ಇತ್ತ್. ಅವನ ತಮ್ಮಂಗೆ ಒಟ್ಟಿಗೆ ಹೋಗಿ ಮಾಳ ನೋಡಿಕೆ ಉಮೇದ್ ಇತ್ತ್. ಎಂತಾ ಹುಲಿನ ಅಣ್ಣ ಹೊಡ್ದರೂ ಅದರ ತಿಂಬಕಾದುಲೆಲೆ. ಅದೊಂದ್ ಬೇನೆ ಅವಂಗಿತ್ತ್. ಒಮ್ಮೆ ಮುಳ್ಳಂದಿ ಆದರೂ ಸಿಕ್ಕಿರೆ ಸಾಕ್‌ಂತ ನೆನ್ಸಿ ಕಂಡವ ಅಣ್ಣನ ಮಾತ್‌ಗೆ ಬೇರೇನೂ ಮಾತಾಡದೆ ಲೈಟ್ ತೆಕಂಡ್ ಅಂಗಳಕ್ಕಿಳ್ದವ ಏನೋ ನೆನ್ಪಾಗಿ ಹೇಳ್ತ್. ಈಗ ಬೇಡಣ್ಣ ನೀ ಬಂದ ಮೇಲೆ ನೋಡೋಮೋಂತ ಅದ್ ಸರಿಕಂಡ್ ನಾರಾಯಣ ಬೀಸ ಹೊರ್ಟತ್. ಇಂತದರ, ಇಂತಾ ಸಂಗತಿಗಳ ಜೀವನ ಕಾಲಲಿ ಬಾರೀ ಕಂಡಿದ್ದ ಚೆನಿಯಣ್ಣ ಅಂಗಳಲಿ ಅಗ್ಗೆ ಹಾಕಿಕಂಡ್ ಎಳ್ಡರೂ ಬಾರದಿರ್ವ ಸಾಧು ಬೀಡಿನ ಬುಕ್ಕಿ ಬುಕ್ಕಿ ಎಳ್ಕಂಡ್ ಸುಖ ಪಡ್ತಿದ್ದೊ.

***

ಸುಮಾರ್ ಒಂದ್ ಗಂಟೆ ರಾತ್ರೆಗೆ ಮನೆಲಿದ್ದ ನಾಯಿಗ ಎಲ್ಲನೂ ಒಟ್ಟಿಗೆ ಬೊಗ್ಳಿಕೆ ಸುರು ಮಾಡ್ದೊ. ಕುಞ್ಞಣ್ಣನ ಪ್ರೀತಿನ ನಾಯಿ ಪಮೇಲನ ಸ್ವರ ಸ್ವಲ್ಪ ದೊಡ್ಡದೇ. ಅದ್ ಆಲ್ಸೇಶನ್ ನಾಯಿ. ತಥ್ ಇವು ಮೊಲ್ಗಿಕೆನೂ ಬುಡ್ದುಲೇಲೇಂತ ಕುಞ್ಞಣ್ಣ ನಿದ್ದೆಂದ ಎದ್ದತ್. ನಾಯಿಗಳ ಬೊಬ್ಬೆನ ನಡುಲಿನೂ, ಅಣ್ಣಾ, ಓ ಅಣ್ಣಾಂತ ಕರಿದು ಕೇಳ್ತಿತ್ತ್. ಯಾರೋ ಬಂದಿರೊಕು, ನಾರಾಯಣನ ಸ್ವರದಾಂಗೆ ಉಟ್ಟಲೆ, ಕುಞ್ಞಣ್ಣ ಎದ್ದವನೇ ಕೈಲಿ ಲೈಟ್ ತೆಕಂಡ್ ಮಾಳಿಗೆಲಿ ಮಲ್ಗಿದ್ದವ ಕೆಳಗೆ ಇಳ್ತ್. ಅಷ್ಟೊತ್ತಿಗೆ ಅವನ ಅಪ್ಪ ಬಾಬಣ್ಣಣ್ಣ ಬಾಗಿಲ್ ತೆಗ್ದ್ ಹೊರಗೆ ಬಂದವು. ಯಾರ್..ಯಾ..ಂತ ಕೇಳ್ತಿದ್ದೊ. ಮನೆನ ಹಿಂದೆನ ಚಿಕ್ಕು ಮರದಾಚೆನ ಪನ್ನೇರಳೆ ಮರಂದ ಲೈಟ್‌ನ ಬೊಳ್ಪುನೂ, ಕರಿದುನೂ ಕೇಳ್ತಿತ್ತ್. ಹುಲಿನಂತಾ ಹುಲಿನ ಹೊಡ್ದ್ ಹೇಳಿಕೆ ಬಂದ ನಾರಾಯಣ ನಾಯಿಗೆ ಹೆದ್ರಿ ಪನ್ನೇರಳೆ ಮರದ ಮೇಲೆ ಹತ್ತಿದವ ಕರ್‍ಯತ್ತಿತ್ತ್. ನಾಯಿಗಳ ಹೆರ್ದಿಸಿದ ಬಾಬಣ್ಣಣ್ಣ. ಬಾ ಏನೂ ಮಾಡಿಕಿಲೆಂತ ಹೇಳಿ ನಾರಾಯಣನ ಕರ್‍ದೊ. ಕುಞ್ಞಣ್ಣನೂ ಅಲ್ಲೇ ಇತ್ತ್. ಇಷ್ಟಾಕನ ನಾರಾಯಣಂಗೆ ಇಳ್ಯಕೆ ಧೈರ್ಯ ಬಾತ್. ಇಳ್ಕಂಡ್ ಬಾಕನನೇ, ನಾ... ಏನೂ ಮಾಡ್ಬಡೀಂತ

ನಾಯಿಗಳಿಗೆ ಸಮಾಧಾನ ಹೇಳಿಕಂಡೇ ಬಂದವ ಮನೆ ತಿಂಟೆಲಿ ಕುದ್ದತ್. ಅಂವ ಅವನ ಲೆಕ್ಕಲಿ ಬರೇ ಕುದ್ದದ್ ಅಲ್ಲ. ಅವನ ಸಮಸ್ತ ಹೊರೆನನೂ ತಂದ್ ಬಡ್ಡಡ್ಕದ ತಿಂಟೆಲಿ ಹೊತ್ತ್ ಹಾಕಿ ಕುದ್ದಾಂಗೆ ಕುದ್ದತ್. ಸ್ವಲ್ಪ ಸಮಯ ಅವಂಗೆ ಮಾತೇ ಬಾತ್ಲೆ. ಮೊನ್ನೆ ಬೊಳ್ಪುಗೆ ಇಲ್ಲಿಗೆ ಬಂದ್ ಹೋದವಂಗೆ ದೇಹಕ್ಕೆ ಪುರ್ರೋತ್ತ್ ಸಿಕ್ಕಿದ್ದರೂನೂ ಮನ್ಸ್‌ಗೆ ಪುರ್ರೊಸ್ತು ಸಿಕ್ಕಿದ್ ಇಲ್ಲಿ ಕುದ್ದಾಕನೇ. ಇಂತಾ ಮದ್ಯ ರಾತ್ರಿಲಿ ಅವ ಬಂದಿರೊಕರೆ ಬಲವಾದ ಕಾರಣನೇ ಇರ್ದು. ಅವನೇ ಮಾತಡಲೀಂತ ಮನೆವು ಸುಮ್ಮನಿದ್ದೊ. ಕುಞ್ಞಣ್ಣನ ಅಮ್ಮ ತಂದ್‌ಹಿಸಿದ ನೀರ್‌ನ ಚೊಂಬ್‌ನ ಪೂರಾ ಕಾಲಿ ಮಾಡ್ದ ನಾರಾಯಣ ಈಗ ಬಾಯಿ ಬುಟ್ಟತ್.

"ಅಣ್ಣಾ ನಾ ಒಂದ್ ಹುಲಿ ಹೊಡ್ದೆ" ಒಂದ್ ಕ್ಷಣ ನಿಶ್ಯಬ್ದ. ಯಾರೂ ಮಾತಾಡಿಕೆ ಆಗದಿರುವ ಸ್ಥಿತಿ ಅದ್. ನಾರಾಯಣ ಬಟ್ಟಂಗಾಯಿಲಿ ಹೊಡ್ದ ಗುಂಡ್, ಹುಲಿ ಸಾಯಕಾಕನ ಮರ್ಬದ್ ಇದೆಲ್ಲ ಶಬ್ದಗಳ್‌ಂದ ಇದ್ ಹೆಚ್ಚಾಗಿ ಅಪ್ಪ ಮಂಜನ ಕೆಬಿಗೆ ಬಿದ್ದಿತ್ತ್. ಅವನ ಮಾತ್‌ಗೆ ಯಾವುದೇ ಪ್ರತಿಕ್ರಿಯೆ ಇಲ್ಲೇಂತ ತಿಳ್ದ ನಾರಾಯಣಂಗೆ ಛೇ! ನಾ ಹೇಳ್ದ್ ಇವ್ಕೆ ಗೊತ್ತಾತ್‌ಲೆನೋಂತ ಆತ್. ಅವ ಮತ್ತೊಮ್ಮೆ ಹೇಳ್ತ್. "ಅಣ್ಣ ನಾ ಹುಲಿ ಹೊಡ್ದೆ". ಬಡ್ಡಡ್ಕ ಮನೆಗೆ ಇಂತ ಸುದ್ದಿ ಹೊಸ್ತಲ್ಲ. ನೂರ್ ನೂರ್ ಸರ್ತಿ, ಹೊತ್ತಲ್ಲದ ಹೊತ್ತ್‌ಲಿ ಇಂತಾ ಸುದ್ದಿ ಕೇಳಿಕಂಡೇ ಇದ್ದ ಮನೆ ಅದ್. ಆದರೆ ಇಂದ್ ಬಂದ್ ಹೇಳ್ತಾ ಇರಂವ, ನಾರಾಯಣ. ಒಂದ್ ಕ್ಷಣಕ್ಕೆ ಹುಲಿನ ಕಂಡೆಂತಳೋ, ಹುಲಿ ಉಟ್ಟುಂತಳೋ... ಹೇಳುವ ಮಾತ್‌ನ ಹುಲಿ ಹೊಡ್ದೇಂತ ಹೇಳಿಕಂಡುಟ್ಟೋಂತ ಅನುಮಾನ ಆಗಿತ್ತ್. ಇಲ್ಲೆ ಅವ ಹೇಳ್ದ್ ಹುಲಿ ಹೊಡ್ದೇಂತಳೇ.... ಅರ್ಗಿಸಿಕಂಬಕೆ ಕಷ್ಟ ಆಗಿದ್ದರೂ ಅವನ ಮಾತ್ ನಂಬಕಾಗಿತ್ತ್. ಹೌದು! ಅವ ಹುಲಿ ಹೊಡ್ದೇ ಬಂದಿರೊಕು. ಹೌದು! ಅವ ಹುಲಿ ಹೊಡ್ದುಟು. ಇಲ್ಲದಿದ್ದರೆ ಈ ಕತ್ತಲೆ ಹೊತ್ತ್‌ಲಿ ಅವ ಬಾವ ಅಲ್ಲ. ಒಂದ್ ಕ್ಷಣ ಬಾಬಣ್ಣಣ್ಣಂಗೆ ಹಳೆ ನೆನ್ಪು ಕಣ್ಣಿಗೆ ಬಾತ್ ಬಾರೀ ಹಿಂದೆ ಸುಮಾರ್ ಇಪ್ಪತ್ತ್ ಇಪ್ಪತ್ತೈದ್ ವರ್ಷಗಳ ಹಿಂದೆ, ಈ ಮನೆ ಕಟ್ಟಿಕೆನೂ ಮುಂದೆ. ಇದೇ ರೀತಿಲಿ ಮನೆಗೆ ಬಂದ್ ಅಪ್ಪ ರಾಮಯ್ಯ ಗೌಡ್ರಿಗೆ ಹೇಳ್ದ್ ಇದೇ ರೀತಿ ಇರೋಕು "ಅಪ್ಪಾ ನಾ ಹುಲಿ ಹೊಡ್ದೆ" ಅಂದ್‌ನ ಎಲ್ಲಾ ಸಂಗತಿಗೆ ಒಟ್ಟಾಗಿ ನೆನ್ಪಿಗೆ ಬಂದೊ. ಅಂದ್‌ಂದ್ ಮೇಲೆ ಈ ಮನೆನ ಕುಬಳ್‌ಗೆ ಕೇಳ್ದ್ ಇಂದೇ ಆ ಮಾತ್ **"ನಾ ಹುಲಿ ಹೊಡ್ದೆ"**

****

ಯಾರಿಗೆ ಹೇಂಗೇಂತ ಗೊತ್ಲೆ. ಆದರೆ ಬಡ್ಡಡ್ಕ ಆ ಮನೆಗೆ ಅದೊಂದ್ ಸಂತೋಷದ ಸುದ್ದಿ, ಹೆಮ್ಮೆನ ಸುದ್ದಿ, ಘನತೆನ ಸುದ್ದಿ. ಎಷ್ಟೆಷ್ಟೋ ಹುಲಿಗಳ ಹೊಡ್ದ, ಸುದ್ದಿನ ಕೇಳ್ದ ಮನೆ ಅದ್. ಅಪ್ಪಯ್ಯಜ್ಜ ಅಂತೂ ಜೀವನ ಕಾಲಲೇ ದಂತಕತೆ ಆಗಿ ಜನರ ಕಣ್ಣ್‌ಗೆ ಕಂಡವು. ಅಂತ ಮನೆ ಇಂತಾ ಸುದ್ದಿ ಕೇಳದೇ ವರ್ಷ ವರ್ಷಗಳೇ ಕಳ್ದಿತ್ತ್. ಅಂದ್ ಅಪ್ಪಯ್ಯಜ್ಜ, ರಾಮಯ್ಯಜ್ಜ ಹುಲಿ ಹೊಡಿವ ಕಾಲಲಿ ಅದೊಂದ್ ದೊಡ್ಡ ಸಾಹಸದ, ಸಾಕು ಪ್ರಾಣಿಗಳ ಕ್ರೂರ ಪ್ರಾಣಿಗಳಿಂದ ರಕ್ಷಿಸುವ ಹೆಮ್ಮೆನ ಕಾಲ ಆಗಿತ್ತ್. ಈಗ ನಶಿಸಿಹೋದ ಪ್ರಾಣಿಗಳ, ಬೊದ್ಧಿಕೆ ಬುಡದೇ ಕೊಲ್ಲುದು ಅಪರಾದಿತನ ಆಗಿತ್ತ್. ಆದರೆ ಅದ್ ಯಾವುದೂ ಗೊತ್ತಿಲ್ಲದ ನಾರಾಯಣ, ಆಕಸ್ಮಿಕವಾಗಿ, ಹುಲಿ ಹೊಡ್ಯಕಾಗಿ ಬಂದಿತ್ತ್, ಹೊಡ್ದಿತ್ತ್. ಸುಮಾರ್ ಹೊತ್ತ್ ಒಂದ್ ರೀತಿಲಿ ಯಾವುದೋ ಹಳೇ ಗುಂಗ್‌ಲಿದ್ದ ಬಾಬಣ್ಣಣ್ಣ ಒಮ್ಮೆ ಸಾವರ್ಸಿಕಂಡ್ "ಇಂದನೇ ಇವನ ದೃಷ್ಟಿ ತೆಗಿಂತ" ಸಾವಿತ್ರಿ ಅಕ್ಕಂಗೆ ಹೇಳ್ದೊ. ಅವುನೂ ಒಂದ್ ರೀತಿಲಿ ಇದೆಲ್ಲ ನಂಬದ ಸ್ಥಿತಿಲಿದ್ದೊ. ಕುರ್ಡಿ ನೀರ್ ತಂದ್ ನಾರಾಯಣನ ದೃಷ್ಟಿ ತೆಗ್ದೊ, ಒಳಗೆ ಬಂದ ನಾರಾಯಣ ಎಲ್ಲ ಕತೆ ಸುರೂಂದ ಹೇಳಿಕೆ ಸುರು ಮಾಡ್ತ್. ಈಸಿಚೆಯರ್‌ಲಿ ರಾಮಯ್ಯಜ್ಜ ಕುದ್ದಿದ್ದೊ ಅವರ ಪ್ರಾಯ ಸುಮಾರ್ ಎಂಭತ್ತೈದ್ ಅವು ಒಂದ್ ರೀತಿಲಿ ಆ ಪ್ರಾಯಲಿನೂ ಸರಿಯಾಗಿಯೇ ಇದ್ದೊ. ಅವರ ಮಾನಸಿಕ, ದೈಹಿಕ ಸ್ಥಿತಿ ಸರಿ ಇತ್ತ್. ಅವರ ಈ ಇಳಿ ಪ್ರಾಯಲಿ ಅವು ಇಂತ ಎಷ್ಟೋ ಬೇಟೆಗಳ ಕತೆ ಕೇಳಿದ್ದೊ, ಕಂಡಿದ್ದೊ, ಅನುಭವಿಸಿದ್ದೊ, ಅಪ್ಪಯ್ಯನಂತ ತಮ್ಮ ಇಂತ ನೂರ್ ಬೇಟೆಗಳ ಕತೆಲಿ ನಾಯಕ ಆಗಿತ್ತ್. ಅವುನೂ ದೂರದ ಮಡಿಕೇರಿನ ಶುಂಟಿಕೊಪ್ಪ, ಕುಶಾಲನಗರದ ದುಬಾರೆ ಸುತ್ತ್ ಮುತ್ತ್‌ನ ತುಂಬಾ ಕಾಡ್‌ಲಿ ಅವರ ಯೌವನದ ಪ್ರಾರಂಭಲಿ ಬೇಟೆಯಾಡಿದ್ದೊ. ಅನುಭವ ಸಾವಿರ ಸಾವಿರ ಇತ್ತ್. ಇತ್ತ ಬಾಬಣ್ಣಣ್ಣಂಗೂ ಅದೇ ರೀತಿ ಸುರೂನ ಬೇಟೆ, ಹುಲಿ ಹೊಡ್ದದ್ ಎಲ್ಲ ಕಣ್ಣೆದುರೇ ನಿತ್ತಾಂಗೆ ಕಾಣ್ತಿತ್ತ್ ಒಂದ್ ಕಾಲಲಿ ಅಪ್ಪಯ್ಯನನೂ ಮೀರ್ಸಿ ಬೇಟೆಗಳಲಿ ಬಾಬಣ್ಣಂಗೆ ಹೆಸರಿತ್ತ್. ಹಿಡ್ದ ಗುರಿ ತಪ್ಪದ ಬಾಬಣ್ಣಣ್ಣ ಹೊಡ್ದ ಪ್ರಾಣಿಗಳಿಗೆ ಲೆಕ್ಕನೇ ಇತ್ಲೆ. ಅಪ್ಪಯ್ಯನಾಂಗೇ ಹನ್ನೆರಡರ ಪ್ರಾಯಲೇ ಬಾರೀ ದೊಡ್ಡ ಕಡೆನ ಹೊಡ್ದ ಕೀರ್ತಿ ಅವ್ಕೆ ಇತ್ತ್. ಕುಡಕಲ್ಲ್ ಮನೆಲಿ ಅಂದ್ ಆ ಹೈದ ಹೊಡ್ದ ಕಡೆನ ಕೊಂಬುನ ಹಿಸಿದ್ ಇಂದಿಗೂ ಅಲ್ಲಿ ಉಟ್ಟು. ಎಲ್ಲನೂ ನೆನ್ಪ್‌ನ ಸುಳಿಗ ಸುತ್ತಿಕಂಡ್ ಸುತ್ತಿಕಂಡ್ ಇರಿಕಾಕನ, ಆಗ ಅವರ ಸಣ್ಣ ಪ್ರಾಯಲಿ ಅಪ್ಪಯ್ಯ ಬೋಜಪ್ಪ ಬಂದ್ ಹೇಳ್ದ ಕತೆ ಕಣ್ಣಿಗೆ ಕಂಡಂಗಾತ್. ಬೋಜಪ್ಪ ಬೆಡಿಹಿಡ್ಕಂಡ್ ಬಾಕನೆಲ್ಲಾ ಅವರ ಕತೆ ಕೇಳಿಕೇ ಬಾಬಣ್ಣಂಗೆ ಆಸೆ. ಪ್ರತಿ ಸರ್ತಿನೂ ಒಂದೊಂದ್ ರೋಚಕ ಕತೆಗ ಚಿಕ್ಕಪ್ಪನ ಹಕ್ಕಲೆ ಇರ್ತಿತ್ತ್. ಅಪ್ಪಯ್ಯಣ್ಣಂಗೂ ಅಷ್ಟೇ

ಮಂಜಂತ ಹೇಳ್ರೆ ತುಂಬಾ ಒಳ್ಳೆದ್. ಬಾಬಣ್ಣನ ಒಂದೊಂದ್ ಬೇಟೆನನೂ ಅವುನೂ ಅನುಭವಿಸ್ತಿದ್ದೊ. ಅವೇ ಹೇಳ್ತಿದ್ದೊ ಅವ ನನ್ನ ನೆತ್ತರೆ. ಅವ ಹೊಡ್ದರೆ ಮತ್ತೆ ನೋಡುದು ಏನೂ ಇಲ್ಲೆಂತ.

ಬಾಬಣ್ಣಂಗೆ ಒಮ್ಮೆನೇ ಕಣ್ಣ್ ಮಂಜಾದಾಂಗೆ ಅತ್. ಎದ್ರ್ ಅಪ್ಪ ಕುದ್‌ಕಂಡೊಳೊ. ಆದರೆ ಬೋಜಪ್ಪ ತೀರಿಕಂಡ್ ವರ್ಷಗಳೇ ಕಳ್ದುಟು. ಅವರ ಸಾಹಸಗಳ ಕಂಡ್ ಕೇಳಿ ಬೆಳ್ದವು. ಕಣ್ಣ್‌ನ ನೀರ್‌ನ ಯಾರಿಗೂ ಕಾಣದಾಂಗೆ ಒರ್ಸಿಕಂಡೋ. ಕೆಬಿಗೆ ನಾರಾಯಣನ ಕತೆ ಕೇಳ್ಸಿಕಂಡ್ ಇತ್. ಕಾಲಿಗೆ ಕಟ್ಟಿದ ಬೊಳ್ಳಿಗೆ ಕಟ್ಟಿದ ಕೆಂಪದ ಮರಿನ ಹಿಡ್ಯಕೆ ಬಂದ ಹುಲಿನ ಹೊಡ್ದ ಕತೆ ನಿಜಕ್ಕೂ ಅದ್ಭುತ ಆಗಿತ್. ಇದೇ ರೀತಿಲಿ ಬೋಜಪ್ಪನ ಜೀವನದ ಒಂದ್ ರೋಚಕ ಘಟನೆ ನೆನ್ಪಾತ್. ಅವೇ ಹೇಳ್ದ ಕತೆ ಅದ್. ಬರೇ ಹೇಳ್ದಲ್ಲ. ಬಾಕನ ಹುಲಿಮರಿಗಳನೂ ಹಿಡ್ಕಂಡ್ ತಂದಿದ್ದೊ. ಎಂತಾ ಪೊರ್ಲುನ ಮರಿಗ ಅವು. ಅದರ ತೊಡೆಲಿ ಹಿಸಿಕಂಡ್ ಮೈನ ಪೂಸಿಕಂಡ ಇರಿಕಾನ ಅವು ಹೇಳ್ದ ಕತೆ ಅದ್. ಅವರ ಜೀವಿತ ಕಾಲದ ಒಂದ್ ಅಪರೂಪದ ಬೇಟೆನ ಅನುಭವ ಅದಾಗಿತ್. ಕೊತ್ತಿಗಳಷ್ಟ್ ದೊಡ್ಡದಿದ್ದ ಆ ಪೊರ್ಲ್‌ನ ಮೂರ್ ಮರಿಗಳ ತೊಡೆಲಿ ಮಲ್ಗಿಸಿಕಂಡ್ ಇರಿಕಾಕನ ಬೋಜಪ್ಪ ಹೇಳ್ದ ಕತೆ.

ಬಡ್ಡಡ್ಕಂದ ಸುಳ್ಯಕ್ಕೆ ಸುಮಾರ್ ಆರ್ ಮೈಲ್ ದೂರ. ಆಲೆಟ್ಟಿನ ಗಡೀಂತ ಹೇಳ್ರೆ ಅದ್ ಪಯಸ್ವಿನಿ ಹೊಳೆ. ಆಗೆಲ್ಲಾ ಹೀಂಗೆ ಪಯಸ್ವಿನಿ ಹಾಂಗೆ ಹೀಂಗೇಂತ ಹೇಳ್ತಿತ್ಲೆ. ಎಲ್ಲವೂ ಹೇಳ್ತು ಒಂದೇ ದೊಡ್ಡ ಹಳ್ಳಂತಾ. ಹಳ್ಳಂದ ಆಚೆಗೆ ಸುಳ್ಯ – ಇತ್ತ ನಾಗಪಟ್ಣ. ಹೇಂಗೆ ಹೆಸರ್ ಬಾತೋ ಗೊತ್ಲೆ. ಅಲ್ಲೊಂದು ಕರ್ಗಲ್ಲ್‌ನ ದೇವರ ಗುಡಿ. ಒಳಗೆ ಒಂದ್ ಶಿವಲಿಂಗ. ಆ ಗುಡಿನ ಸುತ್ತು ಬಲ್ಲೆಗ, ಮುಳ್ಳು ತುಂಬಿದ ಅಂಕೋಲೆ ಬಳ್ಳಿಗ. ಹಳ್ಳದ ಕರೆಲೀ ಆಗಳೇ ಜನವಸತಿ ಇತ್. ಹಳ್ಳದ ಕರೇಲಿ ನಾಗಪಟ್ಣಂದ ಸುಮಾರ್ ಎರ್ಡ್ ಮೈಲ್‌ನೊಳಗೆ ಎಡ್ದ ಕರೆಲಿ, ಅಂದರೆ ಆಲೆಟ್ಟಿನ ನಾರ್ಕೋಡ್‌ಂದ ಸುಮಾರ್ ಎರ್ಡ್ ಮೈಲ್ ಆಚೆಗೆ, ಚಳ್ಳಂಗಾರ್, ಪಡ್ಪು, ಕಳಗಿ ಉಟ್ಟು. ಅಲ್ಲಿ ನಾಲ್ಕಾರ್ ಮನೆಗ ಇದ್ದೊ. ಅವರ್ಲಿ ಶೇಷಪ್ಪಾಚಾರಿನೂ ಒಬ್ಬ. ಕಳ್ಗಿ ಶೇಷಪ್ಪಾಚಾರಿನ ಗೊತ್ತಿಲ್ಲದವೇ ಇತ್ಲೆ. ಯಾಕೆಂತ ಹೇಳ್ರೆ ಅವು ಒಬ್ಬ ಬೆಡಿಕೆಲ್ಸ ಮಾಡುವವು. ತುಂಬಾ ಸಜ್ಜನ, ತುಂಬಾ ಪೊರ್ಲ. ಅಪ್ರತಿಮ ಕೆಲ್ಸಗಾರ. ಇಂದಿಗೂ ಆಲೆಟ್ಟಿ ಸುತ್ತುಮುತ್ತಲಿ ಇರುವ ಹಳೇ ಬೆಡಿಗಳ ರಿಪೇರಿ ಎಲ್ಲಾ ಅವೇ ರಿಪೇರಿ ಮಾಡ್ದವು.

ಶೇಷಪ್ಪಣ್ಣನೂ ಕೃಷಿಕನೇ. ಅವ್ಕೆ ಬೇಕಾದಷ್ಟೆ ಭೂಮಿ, ಜಾನುವಾರ್ ಎಲ್ಲಾ ಇತ್. ಬೇಟೆಲಿ ಅವೇನೂ ಕಡಿಮೆ ಅಲ್ಲ. ಅವರ ಮನೆಲಿ ಕೈ ಹಾಕಿದಲ್ಲಿ

ಎಲ್ಲಾ ಬೆಡಿ ತೋಟೆಗ ಸಿಕ್ತಿದ್ದೋ. ಅಷ್ಟ್ ಅವರ ವೃತ್ತಿಲಿ ಅವು ಪ್ರಸಿದ್ಧಿ ಪಡ್ಡಿದ್ದೊ. ಅಂತವರ ಹಟ್ಟಿ ತುಂಬಾ ಇದ್ದ ಜಾನುವಾರ್‌ಗ ಒಂದೊಂದೇ ಕಡಿಮೆ ಆಗ್ತಿದ್ದೊ. ಕಾನ ತೋಟಲಿ ಹುಲಿ ಇತ್ತ್ ಗಡ, ಚಳ್ಳಂಗಾರ್‌ಲಿ ಕರುನ ಹಿಡ್ಡ್‌ಟುಗಡ, ಕೂಟೆಲ್‌ಲಿ ಗಣಪ್ಪಯ್ಯಣ್ಣ ಎರ್ಡ್ ಹುಲಿ ನೋಡ್ದೊಗಡ, ಇಂತಾ ಮಾತ್‌ಗ ದಿನಾ ಕೇಳಿ ಬರ್ತಿತ್ತ್. ಒಟ್ಟಾರೆ ಹುಲಿಗಳ ದೆಸೆಂದ ಹಟ್ಟಿ ಬುಟ್ಟ್ ಕಾಡ್‌ಗೆ ಹೋದ ದನಂಗ ವಾಪಸ್ಸ್ ಬಂದವೆನೋ ಇಲ್ಲೆನೋ.. ಬಂದರೆ ಬಂದೊ. ಇಂತ ಪರಿಸ್ಥಿತಿಲಿ ಇದ್ದೊ. ಹೇಂಗೆಪ್ಪಾ ಇದಂರ್ದ ಪಾರಾದು. ಈ ಬಗ್ಗೆ ಮಾತಾಡಿಕೆನೇ ಬಡ್ಡಡ್ಕದೊರೆಗೂ ಹೋಗಿ ಬಂದಿದ್ದೊ. ಕೂಡ್ ಬೇಟೆ ಮಾಡಿ ಹುಲಿ ಹೊಡಿದೂಂತ ಏನೂ ಪದ್ದತಿ ಇತ್ಲೆ. ಕೂಡ್ ಬೇಟೆಲಿ ಹುಲಿ ಸಿಕ್ಕುದ್ಲೆಂತ ಏನೂ ಅಲ್ಲ. ಅದ್ ಆಕಸ್ಮಿಕ. ಸಾಮಾನ್ಯವಾಗಿ ಹುಲಿ ಹೊಡ್ಯಕೇ ಹೋದಿದ್ದಿರೆ, ಹುಲಿ ಎಲ್ಯಾರ್ ದನನ ಹಿಡ್ದ್‌ಹಾಕಿದ್ ಗೊತ್ತಾದರೆ, ಅದ್ ಪೂರಾ ಮುಗ್ಸದಿದ್ದರೆ, ಮತ್ತೆ ಕೊಂದ್ ಹಾಕಿದ ದನನ ತಿಂಬಕೆ ಬಾಕನ ಅಟ್ಟಳಿಕೆ ಕಟ್ಟಿ ಕಾದ್ ಕುದ್ದ್ ಹೊಡಿದು ಸಾಮಾನ್ಯ ಆಗಿತ್ತ್. ಹಾಂಗಾಗಿ ಹುಲಿ ಎಲ್ಲಿಯಾರ್ ದನ ಹಿಡ್ದದ್ ಗೊತ್ತಾದರೆ, ಮೇಪತ ಮಕ್ಕ ಎಲ್ಲಿಯಾರ್ ಹುಲಿಗಳ ಕಂಡರೆ ಕೂಡ್ಲೇ ಬಂದ್ ತಿಳ್ಸಿಕೆ ಅಪ್ಪಯ್ಯಣ್ಣ ಹೇಳಿದ್ದೊ; ಆಶ್ವಾಸನೆನೂ ಕೊಟ್ಟಿದ್ದೊ. ಈ ಹುಲಿ ಹೊಡಿದು, ಕಾಡ್ ಸುತ್ತುದು ಇದೆಲ್ಲಾ ಅಪ್ಪಯ್ಯನ ಕೆಲ್ಸಂತ ತಿಳ್ಕಂಡಿದ್ದ ರಾಮಯ್ಯಣ್ಣ ಶೇಷಪ್ಪಂಗೆ "ನೀ ಅಪ್ಪಿನ ಮಾತಾಡ್ ಅಂವ ಏನಾರ್ ಮಾಡ್ದುಂತ" ಮುಂದೆನೇ ಹೇಳಿದ್ದೊ. ಅಣ್ಣಂಗೆ ತಮ್ಮನ ಮೇಲೆ ಹೇಂಗೆ ನಂಬಿಕೆ ಇತ್ತೊ ಶೇಷಪ್ಪಾಚಾರಿಗೂ ಅಪ್ಪಯ್ಯಣ್ಣನ ಮೇಲೆ ನಂಬಿಕೆಇತ್ತ್. ಅವರ ನಂಬಿಕೆ ಸುಳ್ಳಲ್ಲ. ಅದ್ ಹಾಂಗೇ ಆತ್. ನೂರೊಂದ್ ಹುಲಿ ಹೊಡ್ದ ಅಪ್ಪಯ್ಯ ಗೌಡನ ಆ ಬೇಟೆ ಅವರ ಜೀವಿತ ಕಾಲದ ಒಂದ್ ಅದ್ಭುತ ಬೇಟೆಯಾಗಿತ್ತ್. ಅವರ ಎಲ್ಲಾ ಬೇಟೆನ ಕೌಶಲ್ಯಗಳಿಗೆ ಅದ್ ಆ ಬೇಟೆ ಒಂದ್ ಮೆರ್‌ಗಾಗಿತ್ತ್. ಅದ್ ನಡ್ಯಕೆ ಮತ್ತೆನೂ ಕೆಲವು ದಿನ ಕಾಯಕಾಗಿತ್ತ್. ಅಪ್ಪಯ್ಯಣ್ಣ ಶೇಷಪ್ಪಾಚಾರಿಗೆ ಹೇಳ್ದ ದಿನ ಬಂದೇ ಬಂದಿತ್ತ್.

ಕರುಹಾಕಿ ಹತ್ತಿಪ್ಪತ್ತ್ ದಿನ ಕಳ್ದಿತ್ತಷ್ಟೆ. ಕಾಡ್‌ಗೆ ಹೋದ ಗಂಗೆ ಹಸು ಹಿಂಬತಾಗಿ ಕತ್ತಲೆ ಆದರೂ ಹಟ್ಟಿ ಸೇರ್‌ತ್ಲೆ. ಆಚೆ ಈಚೆನ ಮೇಪತ ಮಕ್ಕಳ ಹಕ್ಕಲೆ ಕೇಳ್ರೆ ಅವ್ಕೆ ಒಂದ್ ಸಂಗತಿನೂ ಗೊತ್ತಿತ್ಲೆ. ಅವರ್ಲಿ ಒಂದ್ ಹೈದ ಸೊಲ್ಪ ಹೆದ್‌ರ್ದಾಂಗೆ ಕಂಡತ್. ಅಂವ ಶೇಷಪ್ಪಣ್ಣಂಗೆ ಗೊತ್ತಿಲ್ಲದ ಹೈದ ಏನೂ ಅಲ್ಲ. ಯಾಕೆ ಕೂಸ್ ಹೆರ್ದಿಕಂಡ್ ಒಳಾಂತ ಅವು ಪ್ರೀತಿಲಿ ಕೇಳ್ದೊ. ಅವ ಹೇಳದ್ ಸಂಗತಿ ಕೇಳಿ ಅವರ ಎದೆ ನಡ್ಗಿನೇ ಹೋತ್. ಅಂವ ಹೇಳ್ತ್, ಕುಡಕಲ್ಲ್ ಬೊಟ್ಟಕ್ಕೋ.. ಮೊರಂಗಲ್ಲ್ ಬೊಟ್ಟಕ್ಕೊ ನೆಂಟಸ್ತಿಕೆಲಿ ಬಂದ ಪಿಜಿನ, ಅವ ಅಂದ್

ಯಾರ್ದೋ ಗೊತ್ತಿಲೆ, ಒಟ್ಟಾರೆ ಕುಡಕಲ್ಲ್‌ವರ್ದ್ ನಡೆಗಳ ಹೊಡ್ಕಂಡ್ ಕಾಡ್‌ಗೆ ಬಂದಿತ್ತ್. ಯಾಕೇಂತ ಗೊತ್ತೆ ಅಂವ ಓಡಿಕಂಡ್ ಹೋಗಿ ಪಲ್ಲೆ ಬೊಳ್ಳಿಗೆ ಹತ್ತಿಕಂಡ್ ಹೋದರ ಕಂಡೊಳೆ, ಕೆಳಗೆಕಾಡ್‌ಲಿ ಕುರ್ಕಿಲಿ ಬಲ್ಲೆ ಅಲ್ಲಾಡ್ಸಿಕಂಡ್ ಎಂತದೋ ಒಟ್ಟಿಗೆ ಹೋಗುಟು. ನಂಗೆ ಕಂಡದೆ ಅದ್ ಹುಲೀಂತ. ನಾ ಸುಮಾರ್ ಹೊತ್ತ್ ಅವ ಬಾದೂಂತ ಕಾದೆ. ಅವ ಎಲ್ಲೋ ಮರದ ಕೊಡಿಂದ ಬೊಬ್ಬೆ ಹಾಕ್ತಿತ್ತ್. ನಂಗೆನೂ ಹೆದ್ರಿಕೆ ಆಗಿತ್ತ್. ಅಂವ ಅಲ್ಲಿಂದ ಬೊಬ್ಬೆ ಹಾಕಿಕಂಡೇ ಇರಿಕಾನ ನಾ ಬಂದ್ ಎಲ್ಲವರ ಸೇರ್ಸಿ ಆತ್ತ್ ಹೋಕೂಂತ ಇದ್ದೆ. ನಾ ಬಂದ್ ನೋಡಿಕಾನ ಒಟ್ಟಿಗೆ ಬಂದವು ಎಲ್ಲವೂ ಹೋಗಿ ಆಗಿತ್ತ್. ನಂಗೆ ಬಾಕೆ ಮನ್ಸ್ ಇಲ್ಲದಿದ್ದರೆನೂ ಹೆದ್ರಿಕಂಡ್ ವಾಪಸ್ಸ್ ಬಂದೆ. ಅದ್ ಹುಲಿನೇ... ಅದ್ ಮೊರ್ದದರ ನಾ ಕೇಳ್ಯೊಳೆ. ಅದ್ ಅವನ ಈಗ ತಿಂದ್ ಮುಗ್ಸಿರ್ದು.

ಶೇಷಪ್ಪಣ್ಣ ಒಂದ್ ಕ್ಷಣ ಹೆದ್ರಿ ಹೋಗಿದ್ದೊ. ಅವ್ಕೆ ಹುಲಿ ಅವರ ದನನ ಹಿಡ್ದಿರ್ದೂಂತ ಅನುಭವ ಹೇಳಿತ್ತ್. ಆದರೆ ಅವು ಹೈದಂಗಳ ಕರ್ಡ್ ಕೇಳ್ದ್ ಹುಲಿ ಎಲ್ಲಿ ದನ ಹಿಡ್ದಿರ್ದುಂತ ತಿಳ್ಯಕೆ ಮಾತ್ರ. ಆದರೆ ಈಗ ಈ ಪಡ್ಪು ಹೈದಂದ ಗೊತ್ತಾದ ಸತ್ಯ ಕೇಳಿ ಅವು ಒಂದ್ ರೀತಿಲಿ ಅವರ ಎಲ್ಲಾ ಬಲಗಳ ಕಳ್ಕಂಡ್ ನಿಸ್ತೇಜ ಆಗಿದ್ದೊ. ಆ ಹೈದ ಬೊದ್ಕಿಟೋ...? ಪಡ್ಪು ಹೈದನ ಹೋಕೆ ಬುಟ್ಟತ್ತ್‌ಲೆ; ಅವನ ಕರ್ಕಂಡ್ ಬೆಡಿ ಹಿಡ್ಕಂಡೇ ಹೋಗಿ ಪಡ್ಪು ಸುತ್ತ್‌ಂದ ಕೂಟೇಲ್‌ನ ಕರೇಂದ ಜನ ಸೇರ್ಸಿದೋ. ಅವರೊಟ್ಟಿಗೆ ಬಂದ ಕೂಟೇಲ್ ಗಣಪಯ್ಯಣ್ಣ ಹೇಳ್ದೊ. ಯಾರಾರ್ ಹೋಗಿ ಬಡ್ಡಡ್ಕಂದ ಅಪ್ಪಯ್ಯಣ್ಣನ ಕರ್ಕಂಡ್ ಬರೊಮೋಂತ ಎಲ್ಲವ್ಕೂ ಅದ್ ಸರಿ ಕಂಡ್‌ತ್. ಆ ಕರಿಗೂಟೆ ಕತ್ತಲೆಲಿ ಅವು ಬಡ್ಡಡ್ಕ ಕಡೆಗೆ ಹೊರ್ಡೊ.

ತೋರಿಮಲೆನೋ... ಚೆತ್ತ್‌ಕಾಯಿನೋ ಎಲ್ಲಿಗೋ ಗೊತ್ತ್‌ಲೆ. ಬೆಡಿ ತೆಕಂಡ್ ಹೋಗಿ ಬಂದ ಅಪ್ಪಯ್ಯಣ್ಣ ಮೀಂದ್ ಮೊಲ್ಗಿದ್ದೊ ಅಷ್ಟೆ. ಅಂತಾ ಕತ್ತಲೆಲಿ ಬೆಡಿ, ಜನ ಸಮೇತ ಶೇಷಪ್ಪಣ್ಣ ಬಡ್ಡಡ್ಕಕ್ಕೆ ಬಂದೋ. ಈಗ ಬಡ್ಡಡ್ಕಲಿ ಎರ್ಡ್ ಮನೆ ಇತ್ತ್. ರಾಮಯ್ಯಣ್ಣ, ಅಪ್ಪಯ್ಯಣ್ಣ ಪಾಲಾಗಿದ್ದೊ. ಎರ್ಡ್ ಮನೆನೂ ಹಕ್ಕಲೆ ಹಕ್ಕಲೆನೇ ಇತ್ತ್. ಅವ್ಕೆ ಅಣ್ಣ ತಮ್ಮಂದರ್ಗೆ ಪಾಲಾಗಿ ಸುಮಾರ್ ವರ್ಷಗಳೇ ಕಳ್ದಿತ್ತ್. ಅಂದರೂ ಒಂದ್. ಅವ್ಕೆ ಆಚೆಮನೆ, ಈಚೆ ಮನೆಗಳ ಆಗ್ ಹೋಗ್‌ಗ ಎಲ್ಲಾ ಗೊತ್ತಾಕ್ತಾ ಇತ್ತ್. ಕರಿಗೂಟೆ ಕತ್ತಲೆಲಿ ಜನಂಗ ಬಾಕನ ಎರ್ಡ್ ಮನೆಗೂ ಗೊತ್ತಾಗಿತ್ತ್. ಎಲ್ಲವೂ ಎದ್ದ್ ಕುದ್ದಿದ್ದೊ. ಒಂದ್ ಇತಿಹಾಸಂತ ಹೇಳ್ರೆ ಅದ್ಕೆ ಕಾಲ, ಸಮಯ ಎಲ್ಲನೂ ಹೇಳಕಾದೆ. ಅದ್ ಸರಿ ಸುಮಾರ್ ಸಾವಿರದ ಒಂಭೈನೂರ ನಲವತ್ತ ಎಂಟ್ ಅಥವಾ ನಲವತ್ತ ಒಂಭತ್ತನೇ ಇಸವಿ. ಎರಡ್

ಮಹಾಯುದ್ಧಗ ಮುಗ್ದಿದ್ದೊ. ಭಾರತಕ್ಕೆ ಸ್ವಾತಂತ್ರ್ಯ ಸಿಕ್ಕಿತ್ತ್. ಆ ಎರಡ್ ಮನೆಗಳಲಿ ಈಗ ಎರಡ್ ಬಾರೀ ಹೆಸರ್‌ನ ಬೆಡಿಗ ಇದ್ದೊ. ಒಂದ್ "ಜೀಕೋ ಜರ್ಮನ್" ಎರಡನೇ ಮಹಾಯುದ್ಧ ಕಾಲಲಿ ಭಲಿಷ್ಟ ರಾಷ್ಟ್ರದ ಜರ್ಮನ್‌ನ ಬೆಡಿ. ಅದೊಂದ್ ಯಾವುದೇ ರೀತಿಲಿ ಒಂದ್ ಅಸಾಮಾನ್ಯ ಬೆಡಿ. ಮತ್ತೊಂದ್ ಗ್ರೇಟ್ ಬ್ರಿಟನ್‌ನ ಮೇಡ್‌ನ "ಮಿಡ್‌ಲ್ಯಾಂಡ್ ಗನ್" ಕಂಪನಿನ "ಸಡನ್ ಡೆತ್" ಹೆಸರ್‌ನ ಬೆಡಿ. ಆ ಬೆಡಿ ಅಪ್ಪಯ್ಯಜ್ಜನ ಬೆಡಿ ಅದ್‌ಕೆ "ಸಡನ್ ಡೆತ್" ಹೆಸರ್‌ನ ಯಾರ್ ಆಯ್ಕೆ ಮಾಡಿದ್ದೊನೊ ಗೊತ್ಲೆ. ಅದ್ ಅಪ್ಪಯ್ಯಣ್ಣ ಕೈಲಿ "ಸಡನ್ ಡೆತ್" ಆಗಿಯೇ ಮೆರ್ತ್. ರಾಮಯ್ಯಣ್ಣನ ಜೀಕೋ ಜರ್ಮನ್, ಅದೊಂದ್ ಸಡನ್ ಡೆತ್ ಬೆಡಿಂದಲೂ ಅಸಮಾನ್ಯ ಬೆಡಿ. ಆ ಬೆಡಿ ನಿಜಕ್ಕೂ ಒಂದ್ ವಿಶೇಷ ಬೆಡಿ. ಅಪ್ಪಯ್ಯಜ್ಜನ ಬೇಟೆನ ವಿಹಾರಕ್ಕೆ, ಬೆಡಿನ ನಂಬಿಕೆಗೆ, ಗುರಿನ ವಿಶೇಷಕ್ಕೆ, ಸುರುನ ಪಾಠಕ್ಕೆ ನಾಂದಿ ಹಾಡ್ದ ಬೆಡಿ. ಅಪ್ಪಯ್ಯಣ್ಣನ ಮನೆಗೆ ಹೋಕರೆ ರಾಮಯ್ಯಣ್ಣ ಮನೆನ ದಾಟಿಯೇ ಹೋಕು. ಶೇಷಪ್ಪಣ್ಣ ವಿಷಯ ಹೇಳಿಕನ ಅಂದ್‌ನ ದಿನ ರಾಮಯ್ಯಣ್ಣ ಮನೆಲಿ ಇತ್ಲೆ. ಸೋದರ ಸೊಸೆನ ಮನೆ ಐವರ್ನಾಡ್‌ನ ಕೋಡ್ತಿಲಕ್ಕೆ ಹೋಗಿದ್ದೊ.

ತಿಮ್ಮನ ಮೂಲೆ ವೆಂಕಪ್ಪನ ಕರ್ಕಂಡ್ ಕಾಡ್ ಹತ್ತಿದ ಬಾಬಣ್ಣ ಹೈದ ಮನೆ ತಲ್ಪಿ ಮಲ್ಗಿಕಾಕನ ಮಧ್ಯ ರಾತ್ರಿ. ಇತ್ತೀಚೆಗೆ ಬಾಬಣ್ಣನ ಕಾಡ್ ಹತ್ತ್‌ವ ಚಟ ಜಾಸ್ತಿ ಆಗಿತ್ತ್. ಅಪ್ಪ ಮನೆಲಿಲ್ಲದೆ, ಬೆಡಿ ಮನೆಲಿದ್ದರೆ ಬಾಬಣ್ಣ ಕಾಡ್ ಹತ್ತುದ್ ಕಂಡಿತಾ. ಅಂದ್ ಹಾಂಗೆನೇ ಆಗಿತ್ತ್. ಸುಳ್ಯಕ್ಕೆ ಯಾವ್ದೊ ವ್ಯವಹಾರಕ್ಕೆ ಹೋದ ರಾಮಯ್ಯಣ್ಣ ಇಂದ್ ಬಾದುಲೆ ನಾಳೆನೋ ನಾಳ್ದೊ ಬನ್ನೇಂತ ಚೋಯಂಬುನೊಟ್ಟಿಗೆ ಹೇಳಿ ಕಳ್ಸಿದ್ದೊ. ಆ ಸುದ್ದಿ ಕೇಳಿಕಾಕನೇ ಬಾಬಣ್ಣಂಗೆ ಕುಶಿ ಆಗಿತ್ತ್. ಹಾಂಗೇ ಅಂದ್ ಅವನೂ ಕಾಡ್‌ಗೆ ಹೋಗಿತ್ತ್. ಬಾಬಣ್ಣ ಕಾಡ್‌ಗೆ ಹೋದರೆ ಬರಿಕೈಲಿ ಬಾದೇ ಕಡಿಮೆ. ಅಂದುನೂ ಹಾಂಗೇನೇ. ಪೂರಾ ಕತ್ತಲಾಕೆ ಮುಂದೆನೇ ಒಂದ್ ಕೊಂಬ ಕೆಂಪನ ಹೊಡ್ದಿತ್ತ್. ಅದರ ತಂದ್, ಚೋಲಿ ಬುಡ್ಸಿ, ಕೆಸೊಳಿಕೆ, ಕನ್ನು, ಕರ್ಯಾಡನ ಬೇರೇ ಹಿಸಿ, ಬೇರೆ ಸುರೂಗೆ ಗೈಪ್ ಮಾಡಿ, ಬೊಡ್ಡಜ್ಜಂಗೆ ಬಳ್ಸಿ ಆಗಲ್ ಉಂಡ್ ಮಲ್ಗಿದ್ ಅಷ್ಟೇ. ಅಷ್ಟೊತ್ತಿಗೆ ಅವು ಬಂದಿದ್ದೊ. ವಿಷಯ ತಿಳ್ದ ಬಾಬಣ್ಣಂಗೆ ಹಾಲ್ ಕುಡ್ದಷ್ಟೇ ಕುಶಿ ಆಗಿತ್ತ್. ಇಂದ್ ನಂಗೂ ಒಂದ್ ಅವಕಾಶ ಇರ್‍ದೂಂತ. ಬನ್ನೇಂತ ಶೇಷಪ್ಪಣ್ಣನಲ್ಲಿ ಹೇಳಿಕೆನೂ ಹೇಳಿತ್ತ್. ಆದರೆ ಅವನ ಉತ್ಸಾಹಕ್ಕೆ, ಅತ್ತ ಬೋಜಪ್ಪಂದ ಆಗಲಿ, ಇತ್ತ ಶೇಷಪ್ಪಣ್ಣಂದ ಆಗಲಿ ಯಾವುದೇ ಪ್ರೋತ್ಸಾಹ ಸಿಕ್ಕಿತ್ತ್ಲೆ. ಒಟ್ಟಿಗೆ ಅವ್ವನ ಕಡೆಂದ ಬೊಯ್ಗಿಳ್ ಮಾತ್ರ. ಎಲ್ಲಾ ಪ್ರಯತ್ನ ಮುಗ್ಸಿಕನ ಸಿಟ್ಟ್ ಬಂದ್ ಗುಡಿಹೊದ್ದ್ ಮಲ್ಗಿತ್ತ್. ಅಷ್ಟೊತ್ತ್‌ಗೆ ಅಂಗಳದ ಕರೆಂದ ಬೋಜಪ್ಪ ಹೇಳ್ದು ಕೇಳ್ತ್. "ಅಣ್ಣನ ಬೆಡಿನೂ ಹಿಡ್ಕ ಶೇಷಪ್ಪಣ್ಣ"ಂತ

ಮಲ್ಗಿದ ಬಾಬಣ್ಣ ಎದ್ದ್ ಬಂದ್ ಬೆಡಿನನೂ ತೋಟೆ ಚೀಲನೂ ಶೇಷಪ್ಪಣ್ಣನ ಕೈಲಿ ಕೊಟ್ಟ್ ಮತ್ತೆ ಹೋಗಿ ಮಲ್ಗಿತ್ತ್. ಬಾಬಣ್ಣನ ಒಟ್ಟಿಗೆ ಕರ್ಕಂಡ್ ಹೋಕೆ ಬೋಜಪ್ಪ ಅಪ್ಪಯ್ಯಣ್ಣಂಗೆ ಮನ್ಸಿತ್ತ್. ಆದರೆ ಮನೆಲಿ ಅಣ್ಣ ಇಲ್ಲದಿರಿಕಾಕನ ಕರ್ಕಂಡ್ ಹೋಗಿ ಏನಾರ್ ತೊಂದರೆ ಆದರೆ... ರಗಳೆನೇ ಬೇಡಾಂತ ಸುಮ್ಮನಾಗಿದ್ದೊ. ಅವ್ಕೆ ಗೊತ್ತಿತ್ತ್ ಬಾಬಣ್ಣ ಏನ್ ಸಣ್ಣ ಈಡ್‌ಗಾರ ಅಲ್ಲಾಂತ.

ಬಡ್ಡಡ್ಕಕ್ಕೆ ಹೋಗಿ ಬಾದು ಏನ್ ಸಣ್ಣ ಕೆಲ್ಸ್ ಅಲ್ಲ. ಆರ್ ಮೈಲ್ ನಡ್ದ್ ಹೋಗಿ ನಡ್ಕಂಡೇ ಬರೋಕು. ಕತ್ತಲೆಲಿ ಶೇಷಪ್ಪಣ್ಣ ಗಡಿಬಿಡಿ ಮಾಡ್ರೆನೂ ಅಪ್ಪಯ್ಯಣ್ಣಂಗೆ ಗೊತ್ತಿತ್ತ್. ಈ ರಾತ್ರಿಲಿ ಅಲ್ಲಿ ಹೋಗಿ ಏನೊ ಮಾಡಿಕೆ ಆಕಿಲೇಂತ. ಬೊಳ್ಪು ಮೂಡುವವರೆಗೆ ಕಾಯಕಾಗಿತ್ತ್. ಹಾಂಗಾಗಿ ಯಾವ ಅವಸರನೂ ಮಾಡದೆ ಸಮಾಧಾನಲೇ ನಡ್ದ್ ಬಂದ್ ಕಳ್ಗಿ ಸೇರ್‍ದೊ. ಶೇಷಪ್ಪಾಚಾರಿನ ಮನೆಲಿ ನಾಲ್ಕೈದ್ ಜನ ಇದ್ದೊ. ಅಪ್ಪಯ್ಯಣ್ಣ ಬಂದಾಂಗೆ ಮೇಪತ ಹೈದನ ಕೇಳ್ದೊ. ಎಲ್ಲನೂ ಸತ್ಯ ಆಗಿ ವಿವರ್ಸಿ ಹೇಳ್ದರ ತಿಳ್ಕಂಡೊ. ಅವಂದ ಅವ್ಕೆ ಸುಮಾರ್ ವಿಷಯ ತಿಳ್ದ್ ಬಾತ್. ಅವನ ಹೇಳಿಕೆನ ಪ್ರಕಾರ ಸುಮಾರ್ ಹದ್ನೈದ್ ದಿನಗಳಂದ ಒಂದ್ ಹೆಣ್ಣ್ ಹುಲಿ ಅಲ್ಲೇ ಸುತ್ತ್ ಮುತ್ತ್ ಸುತ್ತಾಡಿಕೊಂಡ್ ಉಟ್ಟೊಂತ. ಒಂದೆರ್ಡ್ ಸರ್ತಿ ಕಂಡೊಳೋಂತಳೂ ಹೇಳ್ತ್. ಅವ ಹೇಳ್ದರ ಕೇಳ್ದವ್ನೆ ಒಂದ್‌ಂತೂ ನಿಗಂಟ್ ಆಗಿರೊಕೂಂತ ಕಂಡತ್. ಅವರ ಅಪಾರ ಬೇಟೆನ, ಅದರ್ಲಿನೂ ಹುಲಿಗಳ ಬಗ್ಗೆನ ಅನುಭವ ಒಂದ್ ಹೇಳಿತ್ತ್. ಏನ್‌ಂತ ಹೇಳ್ರೆ ಸಾಮಾನ್ಯವಾಗಿ ಹುಲಿಗ ಒಂದೇ ಪ್ರದೇಶಲಿ ತುಂಬಾ ದಿನ ಸುತ್ತಾಡ್ದುಲೆ. ಅಂತದರ್ಲಿ ಮೇಪತ ಹೈದ ಹೇಳ್ದಂಗೆ ಈ ಹುಲಿ ಸುಮಾರ್ ದಿನಗಳ್‌ಂದ ಇಲ್ಲೇ ಉಟ್ಟೊಂತ ಆದರೆ, ಅದ್ಕೆ ಕಾರಣ ಏನೋ ಇರೋಕು. ಒಂದೋ ಹುಲಿ ತುಂಬಾ ಪ್ರಾಯದ ಮುದಿ ಆಗಿರೊಕು. ಇಲ್ಲರೆ ಪೆಟ್ಟಾಗಿ ಓಡಾಡಿಕೆ ಕಷ್ಟ ಆದ್ದ್ ಆಗಿರೊಕು. ಅಥವಾ ಅದ ಮೊರಿ ಹಾಕಿದ ಹುಲಿ ಆಗಿರೊಕು. ನಾ ಎಲ್ಲ ಸರ್ತಿ ಕಂಡದುನೂ ಪಲ್ಲೆಕಾಯಿ ಬಲ್ಲೆ ಕರೆಲಿಂತ ಹೇಳ್ತ್. ಎಲ್ಲವೂ ಸೇರಿ ಅದ್ ಮರಿ ಹಾಕಿದ ಹುಲಿನೇ ಆಗಿರೊಕೂಂತ ತೀರ್ಮಾನಕ್ಕೆ ಬಂದ್ದಿದ್ದೊ. ಆಗ ಹೊತ್ತ್ ಸುಮಾರ್ ರಾತ್ರಿ ಕಳ್ದ್ ಬೊಳ್ಪುನ ಕೋಳಿ ಕೂಂಗುವ ಹೊತ್ತಾಗಿತ್ತ್. ಸರೀ ಬೊಳ್ಪಾಗದೆ ಅಲ್ಲಿಗೆ ಹೋದೂ... ಸಾಯಕೆ ಹೋದೂ ಒಂದೇಂತ ಎಲ್ಲವ್ಕೆನೂ ಗೊತ್ತಿತ್ತ್. ಹಾಂಗೇ ತೀರ್ಮಾನ ಮಾಡಿ ಅಲ್ಲಿಅಲ್ಲಿನೇ ಮಲ್ಕ್ಯಂಡೋ. ಅಪ್ಪಯ್ಯಣ್ಣಂಗೆ ಒಂದು ದಿಂಬುನೂ ಮೊಂದ್ರಿನೂ ಶೇಷಪ್ಪಾಚಾರಿಗ ಕೊಟ್ಟೊ. ಅವುನೂ ಮಲ್ಕ್ಯಂಡೊ. ಮನ್ಸ್ ಮಾತ್ರ ಮೊಲ್ಗಿತ್ತೆ. ಆ ಮೇಪತ ಹೈದ ಏನಾತೋ... ಮರ ಹತ್ತಿದವ ಅಲ್ಲೇ ಉಟ್ಟೊ.. ಅಲ್ಲರೆ ಹುಲಿನ ಬಾಯಿಗೆ ಬೀತೋ... ತಲೆತುಂಬಾ ಅದೇ ಚಿಂತೆ. ಎಷ್ಟ್ ಹೊತ್ತಿಗೆ ನಿದ್ದೆ ಬಾತೋ

ಗೊತ್ಲೆ. ಶೇಷಪ್ಪಣ್ಣ ಕರ್ಯಕಾಕನನೇ ಎಚ್ಚರಿಕೆ ಆದ್. ಆಗ ಬೊಳ್ಪೊಳ್ಪು ಆಗಿತ್ತ್ ಅಷ್ಟೆ. ಅಷ್ಟೊತ್ತಿಗೆ ಶೇಷಪ್ಪಣ್ಣನ ಹೆಣ್ಣ್ ಅವಲಕ್ಕಿ ಉಪ್ಪ್‌ಕರಿ, ಚಾ ಎಲ್ಲವ್ನೂ ಮಾಡಿದ್ದೊ. ಬಾಳೆಹಣ್ಣ್‌ನೂ ಇತ್ತ್. ಮೊಸಿ ತುಂಡ್‌ಲಿ ಹಲ್ಲುಜ್ಜಿ ಮೋರೆ ನೀರ್ ಹಾಕಂಡ್ ಅವಸರ ಅವಸರಲಿ ಎಲ್ಲವೂ ಚಾ ಕುಡ್ಯಕೆ ಕುದ್ದೊ. ಎಲ್ಲವರ ಮನ್ಸ್‌ಲಿನೂ ಏನೋ ಕಾತರ. ಆಗ ಮನೆನ ಕೆಳಗೆನ ಗದ್ದೆ ಪುಣಿಂದ ಆಚೆ ಇದ್ದ ತಡ್ಮೆನ ಹಾರ್ದಾಂಗೆ ದಾಟಿ ಒಬ್ಬ ಕಟ್ಟಪುಣಿಗಾಗಿ ಓಡಿ ಬರ್ತಿತ್ತ್. ದೂರಂದ್ಲೆ ಅದರ ಕಂಡ ಅಪ್ಪಯ್ಯಣ್ಣ ಕೈಲಿದ್ದ ಅವ್ಲಕ್ಕಿನ ಬಾಳ್ಗೆಗೇ ಹಾಕಿ ಒಮ್ಮೆ ಎದ್ದ್ ನಿತ್ತೊ. ಓಡಿಕಂಡ್ ಬರ್ತಿದ್ದವನ ಓಟಲಿ ಅವನ ಬೊಚ್ಚೆಲ್ ಕಾಣ್ತಿತ್ತ್. ಅವ ಎಂತದೋ ಹೇಳಿಕಂಡೇ ಬರ್ತಿತ್ತ್. ಈಗ ಎಲ್ಲವೂ ಅವರ ಕೆಲ್ಸ ಅಲ್ಲೆ ನಿಲ್ಸಿ ಅತ್ತಲೇ ನೋಡ್ತಿದ್ದೊ. ಓಡ್ದಾಂಗೆ, ನಡ್ದಾಂಗೆ ಒಂದ್ ರೀತಿಲಿ ಒಟ್ಟಾರೆ ಬಂದ್ ಅಂಗಳಲಿ ಕುಸ್ದ್ ಬಿದ್ದಾಂಗೆ ಕುದ್ದತ್. ಬಾಯಿಲಿ ಮಾತ್ ಹೊರ್ಡ್ದುಲೆ, ಕಣ್ಣ್‌ಲಿ ಹೆದ್ರಿಕೆ. ಆ ಕ್ಷಣಲಿ ಅಂವ ಇದ್ದೂ ಸತ್ತಾಂಗಿತ್ತ್. ಗಣಪ್ಪಯ್ಯಣ್ಣ ಓಡಿ ಬಂದ್ ಅವನ ಮೋರೆಗೆ ನೀರ್ ಹಾಕಿದೋ. ಕುಡ್ಯಕೆ ಕೊಟ್ಟೊ. ಎಲ್ಲವೂ ಅವನ ಮಾತಾಡ್ನುದರ್‌ಂದ ಮುಂದೆ ಅವನ ಆರೈಕೆಗೆ ನಿತ್ತಿದ್ದೊ. ಯಾರಂವಂತ ಯಾರಿಗೂ ಗೊತ್ತಿತ್ಲೆ. ಮೇಪತ ಹೈದ ಹೇಳ್ತ್. ಇವನೇ ಅವಾಂತ. ಅಂದರೆ ನಿನ್ನೆ ಹಿಂಬತ್ ಹುಲಿನ ಕಂಡೋ.. ಹುಲಿ ಬೆರ್ಸಿ ಕಂಡ್ ಬಾಕನನೋ ಓಡಿ ಮರ ಹತ್ತಿದವನೇ ಅಂವ. ಅವನ ಕಂಡ ಮೇಪತ ಅಣ್ಣಿ ಹೈದನ ಮೋರೆಲಿ ಒಂದ್ ಸಣ್ಣ ಖುಶಿ ಕಾಣ್ತಿತ್ತ್. ಅಂದರೆ ಅಂವ ಸತ್ತ್‌ತ್‌ಲೆ ಬೊದ್ಕಿ ಬಂದುಟು. ಅವಂಗೆ ಗೊತ್ತಿದ್ದ ದೇವ್ರುಗೆ ಅವ ಮನ್ಸ್‌ಲೇ ಕೈ ಮುಗ್ತ್.

ಕುಡಕಲ್ಲ್ ಬೊಟ್ಟದ ಬೊಟ್ಯತ್ತಿನ ಅಣ್ಣನ ಪಿಳ್ಳಿ ಅಂವ. ವರ್ಷಕ್ಕೆ ಒಂದ್ ಸರ್ತಿನೋ ಎರ್ಡ್ ಸರ್ತಿನೋ ಅವ ಬಂದ್ ಇಲ್ಲಿ ಹತ್ತಾರ್ ದಿನ ಇದ್ದ್ ಹೋದು ಮಾಮೂಲ್. ಕಳ್ದ ಕಳಿಯಾಟಕೆ ಬಂದವ ಸೊಲ್ಪ ದಿನ ಇದ್ದ್ ಹೋಗಿತ್ತ್. ಅವ ಹೋಕನ ಬೊಟ್ಯೆತ್ತಿ ಹೇಳಿತ್ತ್. ಇಂದಾ ಮಳೆ ಬಾಕೆ ಮುಂದೆ ಬಂದ್ ನಾಲ್ಕ್ ದಿನ ಇದ್ದ್ ಹೋಗ್‌ಂತ. ಅವನ ಮನೆ, ಮೇನಾಲನೋ, ನೆಲ್ತಿಲನೋ ಅತ್ತ. ಹಾಂಗೆ ಬಂದವ ಬೊಟ್ಟದ ಸಮದ ಮಕ್ಕಳೊಟ್ಟಿಗೆ ಸೇರಿ ಕಾಡ್‌ಗೆ ಹೋಗಿತ್ತ್. ಅಂವ ಬರೇ ಮೇಪತ ಆಗಿ ಕಾಡ್‌ಗೆ ಹೋದವ ಅಲ್ಲ. ಅವಂಗೆ ಮೆಡ್ಚಿಲ್, ಗೊತ್ತಿತ್ತ್. ಹೆಡಗೆ, ಕೂಂಟಗೆ, ಕೈ ಹೆಡೆಗೆ ಎಲ್ಲಾ ಮಾಡ್ತಿತ್ತಲ್ಲದೇ.. ತೆಳ್ಳಂಗೆ ಮರಕ್ಕೆ ಹಬ್ಬಿದ ಬೀಣೆನ ಕಡ್ಡ್ ಕೆತ್ತಿ ಮರ್ಚಟೆ ಎಲ್ಲಾ ಮಾಡ್ತಿತ್ತ್. ಅಲ್ಲದೆ ಅವಂಗೆ ಜೇನ್ ತೆಗಿವ ಹುಚ್ಚೂ ಇತ್ತ್. ಅದ್ ಬರೇ ತೊಡ್ವೆ, ಕೋಲ್, ಮುಜೆಂಟಿ ಅಲ್ಲ. ಅವ ದೊಡ್ಡ ದೊಡ್ಡ ಮರಕ್ಕೆ ಹತ್ತಿ ಕುಡ್ಪೊಳು, ಪೆರ್ಗ ಜೇನ್‌ಗಳನೂ ತೆಗಿಯತಿತ್ತ್.

ಮರ ಹತ್ತುದರ್ಲಿ ಕುರೆಗ ಅವಂದಳೇ ಕಲ್ತದಿರೊಕು. ಅದೇ ಇಂದ್ ಅವನ ಜೀವ ಉಳ್ಸಿತ್ತ್. ಅವ ಮೇಪತ್ತ ಮಕ್ಕಳೊಟ್ಟಿಗೆ ಬಂದರೆನೂ ಜೇನ್ ಹುಡ್ಕ್ಯೆಂಡ್ ಅವರ ಬುಟ್ಟ್ ಸ್ವಲ್ಪ ಬೇರೆ ಹೋಗಿತ್ತ್. ಜೇನ್ ಹುಡ್ಕುದೂಂತ ಹೇಳ್ರೆ ಜೇನ್ನೊಣಗ ಹಾರುದು. ಹೋದು ಬಾದು ನೋಡಿ ಇಂತಲ್ಲೇ ಇರ್ದುಂತ ಅಂದಾಜ್ ಮಾಡಿಕಂಡ್ ಹುಡ್ಕುದು. ಹಾಂಗೆ ಅಂವ ಹೋಕಂಡ್ ಇರಿಕನ ಎಂತದೋ ಸಣ್ಣ ಸರಸರ, ಸಣ್ಣ ಗುರುಗುರು ಶಬ್ದ. ಏನೋ ಸಂಶಯ ಬಂದ್ ತಿರ್ಗಿ ನೋಡ್ದೆ ಅವಂದ ಸುಮಾರ್ ನಲ್ವತ್ತ್ ಮಾರ್ ದೂರಲಿ ನಿತ್ತ ಹುಲಿ ಅವನತ್ತಳೇ ನೋಡ್ತಿತ್ತ್. ಇಡೀ ಮೈ ಒಮ್ಮೆ ನಡ್ಗಿ ಹೋತ್. ಅಂತಾ ಸಮಯಲಿನೂ ಅವನ ಸಮಯ ಪ್ರಜ್ಞೆ ಸರಿಯಾಗಿತ್ತ್. ಅವ ನಿತ್ತಲ್ಲಿ ಹತ್ತ್‌ವಂತ ಮರ ಇತ್ಲೆ. ಅಂದರೆ ಅಷ್ಟ್ ಬೇಗ ಹತ್ತ್‌ವ ಮರ ಇತ್ಲೆ. ಆದ್ ಅವನ ಸಾವು ಬದ್‌ಕ್‌ನ ಮದ್ಯದ ದೂರ ಆಗಿತ್ತ್. ಅವನನೇ ನೋಡಿಕಂಡ್ ಹುಲಿ ಇತ್ತ್. ಒಂದ್ ಚೂರೂ ಮೊಸ್ಗದೆ ಅವನೂ ಹುಲಿನ ನೋಡಿಕಂಡ್ ಇತ್ತ್. ಅವಂಗೆ ಗೊತ್ತಿತ್ತ್ ಅವ ಮೊಸ್ಗಿದ ಕೂಡ್ಲೆ ಹುಲಿನೂ ಮೊಸ್ಗುದೂಂತ, ಹೀಂಗೆ ಒಂದೆರಡ್ ಕ್ಷಣ ಕಳ್ದಿತ್ತ್. ಅಂತ ಸಮಯಲಿ ಒಂದು ಸಣ್ಣ ಅವಕಾಶ ಅವಂಗೆ ಬಂದಿತ್ತ್. ಬೇರೆ ಯಾವ ಗಮನನೂ ಇಲ್ಲದ ಚಕ್ಕಟೆ ಒಂದ್ ಕೇರಿಕಂಡ್ ಕೇರಿಕಂಡ್ ಹುಳ ಹುಪ್ಪಟೆಗಳ ತಿನ್ತಾ ಬರ್ತಾ ಇದ್ದದಕ್ಕೆ ಅದರ ಎದ್‌ರ್‌ನ ಗಿಡ್ಡೆಕರೆಲಿ ಒಂದ್ ವಿಶೇಷ ಕಂಡಿತ್ತ್. ಅತ್ತ ನೆಲಲಿ ಅಲ್ಲದೆ, ಮೇಲೆನೂ ಅಲ್ಲದೆ ಒಂದ್ ಬೊಳ್ಳಿಲಿ ಕಾಲ್ ಸಿಕ್ಕಿಹಾಕಿಕಂಡ್ ಕಾಲ್ ಮೇಲೆ ತಲೆಕೆಳಗಾಗಿ ನೇತಾಡಿಕಂಡ್ ಸಿಡಿಗೆ ಬಿದ್ದಿದ್ದ ಇನ್ನೊಂದ್ ಚಕ್ಕಟೆನ ಕಂಡತ್. ಇದರ ಕಂಡದೇ ಇನ್ನೂ ಜೀವಲಿ ಇದ್ದ್ ನೇತಾಡ್ತಿದ್ದ ಅದ್, ಅಲ್ಲಿಂದ ತಪ್ಸಿಕಂಬಕೆ ರೆಂಕೆ ಬೊಡ್ತ್. ಇಂತದೊಂದ್ ರೀತಿಲಿ ಕಂಡ್ ಗೊತ್ತಿಲ್ಲದ ಕೇರಿಕಂಡ್ ಬರ್ತಿದ್ದ ಚಕ್ಕಟೆಗೆ ಒಮ್ಮೆನೇ ಯಾವುದೋ ಅಪಾಯದ ಬಗ್ಗೆ ಹೆದ್ರಿದ್ ಜೋರಾಗಿ ತೆಕ್ಕ್ ತೆಕ್ಕ್‌ತ ತೆಕ್ಕಿಕಂಡ್ ಒಮ್ಮೆಗೆ ಮೇಲೆ ಹಾರ್ತ್. ಆ ಕ್ಷಣ ಪಿಜಿನ ಹೈದನ ಜೀವನದಲ್ಲಿ ಒಂದು ದೊಡ್ಡ ಕ್ಷಣ ಆಗಿತ್ತ್. ಆ ಶಬ್ದನ ಕೇಳ್ದ ಹುಲಿ ಒಮ್ಮೆ ಅತ್ತ ತಿರ್ಗಿತ್. ಇದರ್‌ಂದ ದೊಡ್ಡ ಅವಕಾಶ ಪಿಜಿನಂಗೆ ಇತ್ಲೆ. ಹುಲಿನ ತಲೆ ತಿರ್ಗಿದ ಕೂಡ್ಲೆ ಅವ ಅಲ್ಲಿಂದ ಪಲ್ಲೆ ಬೊಳ್ಳಿಕಡೆಗೆ ಓಡ್ತ್. ಹುಲಿ ಅತ್ತ ನೋಡಿ ಇತ್ತ ನೋಡಿಕನ ಅವ ಓಡಿಕಂಡ್ ಇತ್ತ್. ಒಮ್ಮನೇ ಸಿಟ್ಟ್‌ಲಿ ಹುಲಿ ಹೂಂಕರ್ಸಿ ಅವನತ್ತ ಓಡಿಕೆ ಸುರುಮಾಡ್ತ್. ಅವಂಗೂ ಹುಲಿಗೂ ಇದ್ದ ದೂರ ಹುಲಿಗೆ ಯಾವ ಲೆಕ್ಕಕ್ಕೂ ಇತ್ಲೆ. ಆದರೆ ಈಗ ಹಾಂಗಾತ್ಲೆ. ಅವ ಮುಂದೆನೇ ಓಡಿಕೆ ಸುರು ಮಾಡ್ದವ ಪಲ್ಲೆ ಬೊಳ್ಳಿ ಸಿಕ್ಕಿದ ಕೂಡ್ಲೆ ಅವಂದ ಒಂದ್ ಮಾರ್ ಮೇಲಿದ್ದ ಬೊಳ್ಳಿನ ಹಾರಿ ಹಿಡ್ಕಂಡ್ ತಿರ್ಗಿ ಅದರ ಮೇಲೆ ನಿತ್ತತ್. ಆಗ ಹುಲಿ ಇನ್ನೂ ಅಲ್ಲಿಗೆ ತಲ್ಪಿಕೆ ಇನ್ನೂ ಹತ್ತ್ ಮಾರ್

ದೂರಲಿತ್ತ್. ಅದ್ಕೆ ಗೊತ್ತಾಗಿತ್ತ್. ಅಂವ ಇನ್ನ್ ಸಿಕ್ಕುದುಲೇಂತ. ಇಡೀ ಅಸಹನೆನ ಒಟ್ಟ್ ಮಾಡಿ ಒಮ್ಮೆನೇ ಜೋರ್ ಗರ್ಜನೆ ಮಾಡ್ತ್. ಆದರೆ ಪಿಜಿನ ಈಗ ಮರದ ಗೆಲ್ಲ್ ಸಿಕ್ಕಿದ ಕುರೆ ಆಗಿತ್ತ್. ಕುರೆಗ ಮರ ಹತ್ತ್‌ವಷ್ಟೇ ಸಲೀಸಾಗಿ ಬೊಳ್ಳಿನ ಹತ್ತಿದ ಪಿಜಿನ ಈಗ ಹುಲಿಗೆ ಸಿಕ್ಕದಷ್ಟ್ ಮೇಲಿತ್ತ್. ಅವಂಗೆ ಈಗ ಜೀವ ಭಯ ಹೋಗಿತ್ತ್. ಸಿಕ್ಕಿಕಾಗದಿದ್ದಷ್ಟ್ ಎತ್ತರಲಿದ್ದ ಅವನನೇ ನೋಡಿಕಂಡ್, ಬೀಲನ ಬೀಸ್ತಾ ಅತ್ತಿತ್ತ ಕೋಪಲಿ ನಡ್ದಾಡ್ತಿದ್ದ, ಹಾರಿ ಬೊಳ್ಳಿನ ಹಿಡ್ಯಕೆ ಪ್ರಯತ್ನಿಸಿಕಂಡಿದ್ದ ಹುಲಿನ ಈಗ ಬಾರೀ ಹಕ್ಕಲೆಂದಳೇ ಅಂವ ನೋಡ್ತಿತ್ತ್. ಸಾಮಾನ್ಯ ಯಾರಿಗೂ ದಕ್ಕದಿರುವ ಅವಕಾಶ ಅದ್. ಅಂತಾ ಜೀವ ಹೋದಕಾಲದಂತಾ ಕಾಲಲಿನೂ ಪಿಜಿನ ಅದರ ವೈಭವವನೇ ನೋಡ್ತಿತ್ತ್. ಹೊತ್ತ್ ಕತ್ತಲೆ ಆಕೆ ತುಂಬಾ ಸಮಯ ಏನೂ ಇತ್ಲೆ. ಅಲ್ಲಿಂದ ಇಳ್ದ್ ಹೋದು ಸಾಧ್ಯನೇ ಇತ್ಲೆ. ಅಂದರೂ ಯಾರಿಗಾರ್ ಗೊತ್ತಾಗಲೀಂತ ಜೋರ್ ಬೊಬ್ಬೆ ಹಾಕಿತ್. ಅವನ ಬೊಬ್ಬೆ ಆ ಕಾಡ್‌ನ ಗೊಡಲ್ ಗೊಡಲ್‌ಲಿ ಕಂತಿ ಹೋತ್. ಯಾವ ಉತ್ತರನೂ ಬಾತ್ಲೆ. ಯಾರಿಗೂ ಕೇಳ್ತ್‌ಲೆನೋ... ಹಾಂಗೆ ಅಂವ ತಿಳ್ಕಂಡತ್. ಆದರೆ ಅವಂಗೆ, ಹುಲಿಗೆ ಯಾರಿಗೂ ಗೊತ್ತಿಲ್ಲದೆ ಒಬ್ಬ ಇದರೆಲ್ಲಾ ನೋಡಿತ್ತ್. ಪಿಜಿನನ ಬೊಬ್ಬೆಗೆ ಅವನಲ್ಲಿ ಉತ್ತರ ಇತ್ಲೆ. ಉತ್ತರ ಕೊಟ್ಟರೆ ಅವನ ಜೀವ ಹೋದೂಂತ ಅವಂಗೆ ಗೊತ್ತಾಗಿತ್ತ್. ಅವನೇ ಪಡ್ಡುನ ದನ ಮೇಪತ ಅಣ್ಣಿ. ಅವನೇ ಸುರೂಗೆ ಈ ಸುದ್ದಿ ಕೊಟ್ಟವ.

ಹಿಂಬತ್ ಹಿಂಬತ್ ಆಕನ ಮೇಪತ ಅಣ್ಣಿ ಒಟ್ಟಿಗೆ ಇದ್ದವರ್‌ಂದ ಅವ್ಕಾ ಗೊತ್ತಾಗದಾಂಗೆ ಅಲ್ಲಿಗೆ ಬಂದಿತ್ತ್. ದಿನಾ ಬೊಳ್ಪುಗೆ ಕಾಡ್‌ಗೆ ಬಂದ ಕೂಡ್ಲೆ ಚಕ್ಕಟೆ, ಕಾಡ್‌ಕೋಳಿಗಳಿಗೆ ಸಿಡಿ ಹಾಕಿ ಹಿಸುದು ಅವನ ಅಭ್ಯಾಸ, ಅಲ್ಲೆಲ್ಲಾ ಅವು ತುಂಬ ಇರ್ತಿದ್ದೊ. ಎರಡ್ ದಿನಕ್ಕೊಮ್ಮೆ ಅವಂಗೆ ಚಕ್ಕಟೆನೋ, ಕಾಡ್‌ಕೋಳಿನೋ ಸಿಕ್ಕಿಕಂಡ್ ಇರ್ತಿತ್ತ್. ಮನೆಂದ ಬಾಕನ ಒಂದ್ ಪಾವ್ ಬತ್ತನನೂ ದಿನಾ ಹಿಡ್ಕಂಡ್ ಬಂದ್ ಅವು ಕೇರುವ ಜಾಗೆಲಿ ಹಾಕುದು. ಎರ್ಡ್ ದಿನ ಬುಟ್ಟ್ ಸಿಡಿ ಹಾಕಿ ಬತ್ತನ ಹರ್‌ಂಡಿ ಹೋದು. ಅಂದ್ ಹಿಂಬತೂ ಅಂವ ಬೆರ್ಲಿ ಹಿಸಿದ ಸಿಡಿನ ನೋಡಿಕೆ ಹೋಗಿತ್ತ್. ಒಂದೆರ್ಡ್ ಸಿಡಿಗಳಿಗೆ ಎಂತದೂ ಬಿದ್ದಿತ್ಲೆ. ದೊಡ್ಡ ಗೊಟ್ಟೆ ಹಣ್ಣನ ಬೊಳ್ಳಿನ ಕೆಳಗೆ ಇಂದ್ ಬೊಳ್ಪುಗೆ ಬಂದವನೇ ಸಿಡಿ ಬೆರ್ಸಿ ಹೋಗಿತ್ತ್. ಅವಂಗೆ ಗೇರೆಂಟಿ ಇತ್ತ್. ಅಲ್ಲಿ ಚಕ್ಕಟೆನೋ ಕಾಡ್‌ಕೋಳಿನೊ ಇದ್ದೇ ಇರ್ದೂಂಕ. ಅದರ ನೋಡಿಕಂಡ್ ಎಲ್ಲವೂ ಹೊರ್ಡಿಕೆ ಮುಂದೆ ಒಟ್ಟಿಗೆ ಸೇರಿಕಣೋಕೂಂತ ಬೇರೆ ಯಾವ ಯೋಚನೆನೂ ಮಾಡದೆ ಅತ್ತ ನಡ್ಕಂಡ್ ಇತ್ತ್. ದೂರಲಿ ಆ ಗೊಟ್ಟೆ ಬೊಳ್ಳಿನ ಜಾಗೆ ಕಾಂಬತಿತ್ತ್. ಅಂವ ನೋಡಿಕಂಡ್ ನೋಡಿಕಂಡ್ ಇದ್ದಾಂಗೆ ಅದೇ ಜಾಗೆಂದ ಒಂದ್ ಚಕ್ಕಟೆ ಯಾರನೋ

ಕಂಡಾಂಗೆ ಒಮ್ಮನೇ ತೆಕ್ಕಿಕಂಡ್ ಮೇಲೆ ಹಾರ್‍ತ್. ಛೆ! ಎಂತ ಕೆಲ್ಸ ಆತ್. ನಾ ಬಂದದ್ ಗೊತ್ತಾಗಿ ಹಾರ್‍ತೊ... ಏನೂಂತ ನೆನ್ಸಿಕಂಡ್ ಇರಿಕಾಕನೇ ಆ ಭೀಕರ ಭೂಮಿನೋ ನಡ್ಗ್‌ವಂತಾ ಹುಲಿನ ಅರ್ಬಟೆ ಕೇಳ್ತ್. ಒಮ್ಮೆ ಜೀವ ಇಡೀ ನಿತ್ತಾಂಗೆ ಆಗಿತ್ತ್. ಅವನ ಕಣ್ಣೆದ್‌ರ್‌ನ ದೂರಲಿ ಕುರ್‍ಕಿಲ್ ಕಾಡ್‌ನ ನಡುಲಿ ಓಡ್ದು ಕಂಡತ್. ಅದರ್‌ಂದ ಮುಂದೆ ಏನೋ ಓಡ್ತಿತ್ತ್. ಏನ್‌ಂತ ಗೊತ್ತಾದ್ ಪಿಜಿನ ಬೊಳ್ಳಿ ಹತ್ತಿಕಾಕನನೇ. ಒಂದ್ ಹೆಜ್ಜೆ ಓಸುವ ತ್ರಾಣನೂ ಅವಂಗೆ ಇತ್ಲೆ. ಆದರೂ ಕಣ್ಣ್‌ಗೆ ಎಲ್ಲಾ ಕಂಡ್ ಕಂಡ್ ಇತ್ತ್. ಆ ಪಲ್ಲೆ ಬೊಳ್ಳಿಲಿ ಕುರೆಂದಳೂ ಜೋರ್ ಹತ್ತ್‌ತಿದ್ದದ್ ಪಿಜಿನಾಂತಳೂ ಗೊತ್ತಾತ್. ಅಂವ ಬೊಬ್ಬೆ ಹೊಡ್ಯಕನನೂ ಅಂವ ಅಲ್ಲೇ ಇತ್ತ್. ಅವಂಗೆ ಗೊತ್ತಾಗದಾಂಗೆ. ಅವನ ಉಸಿರಾಟ ಅವಂಗೇ ಕೇಳದಿದ್ದಾಂಗೆ ಒಂದೊಂದೇ ಹೆಜ್ಜೆನ ಹಿಂದೆ ಹಿಂದೆ ಓಸಿಕಂಡ್ ಹೋದವ ಸುಮಾರ್ ಒಂದ್ ಪರ್ಲಾಂಗ್ ದಾಟಿದ ಮೇಲೆ ಸಿಕ್ಕಿದ ಕಾಡ್ ದಾರಿಲಿ ತಿರ್‍ಗಿ ಓಡಿಕೆ ಸುರುಮಾಡ್ತ್. ಮನೆ ಮುಟ್ಟಿದವಂಗೆ ಯಾರಕ್ಕಲೆ ಹೇಳೊಕು, ಏನ್ ಮಾಡೊಕು ಒಂದ್ ಗೊತ್ತಾತ್ಲೆ. ಗೊತ್ತಾದರೆ ಒಬ್ಬನನೇ ಬುಟ್ಟ್ ಬಂದದಕ್ಕೆ ಬೊಯ್ದಿವೆನೋ... ಅಲ್ಲ ಎಲ್ಲವರ ತಪ್ಸಿಕಂಡ್ ಸಿಡಿಹಾಕಿದಕ್ಕೆ ಮನೆಲಿ ಬೊಯಿವೊನೊ, ಯಾರ ಹಕ್ಕಲೆನೂ ಬಾಯಿ ಬುಟ್ಟತ್ಲೆ. ಅವನ ಚಿಂತೆ ಪಿಜಿನಂಗೆ ಏನಾಗಿರ್‍ದೋಂತ ಮಾತ್ರ. ಎಲ್ಲಿಯೋ ಒಂದ್ ನಂಬಿಕೆ ಅವನೊಳಗೆ ಇತ್ತ್. ಪಿಜಿನಂಗೆ ಏನೂ ಆಕಿಲೇಂತ. ಅವಂಗೆನೂ ಗೊತ್ತಿತ್ತ್ ಪಿಜಿನನ ಸಾಮರ್ಥ್ಯಗೆ, ಅಂದರೂ ಕತ್ತಲೆ ಆದ ಮೇಲೆ ಅವಂಗೆ ಅಲ್ಲಿಂದ ಬಾಕೆ ಆಕಿಲೆ. ಅಂದರೆ ಇಡೀ ರಾತ್ರೆ ಅಂವ ಮರದಮೇಲೆ ಹೇಂಗಿರ್ದುಂತ. ಅವನ ನಂಬಿಕೆನೂ ಸರಿನೇ. ಯಾಕೇಂತ ಹೇಳ್ರೆ ಅವ ಹತ್ತಿದ್ದ್ ಪಲ್ಲೆ ಬೊಳ್ಳಿಗೆ.

ಪಲ್ಲೆ ಬೊಳ್ಳಿಂತ ಹೇಳ್ರೆ ಅದ್ ಸಾಮಾನ್ಯ ಬೊಳ್ಳಿ ಅಲ್ಲ. ಹುಲ್ಲ್‌ಗಳ್ಲಿ ಬೆದ್ರ್ ಎಷ್ಟ್ ದೊಡ್ಡದೋ ಹಾಂಗೇನೇ ದ್ವಿದಳ ಬಾಳ್‌ನ ಬೊಳ್ಳಿಗಳ್ಲಿ ಪಲ್ಲೆಕಾಯಿ ದೊಡ್ಡದ್. ಮರದಾಂಗೇ ಇರ್ದು. ಒಂದು ಸಂಪೂರ್ಣ ಬೆಳ್ದ ಬೊಳ್ಳಿಗ ಎಷ್ಟ್ ಎತ್ತರಕ್ಕೆ, ಎಷ್ಟ್ ದೂರಕ್ಕೆ ಹಬ್ಬಿ ಇದ್ದದೇಂತ ಹೇಳ್ರೇ ಆಶ್ಚರ್ಯ ಅದು. ಅಷ್ಟ ಬೆಳ್ದ ಬೊಳ್ಳಿಗ ಸುಮಾರ್ ಒಂದ್ ಕಿ. ಮೀ. ಉದ್ದ ಅಗಲಕ್ಕೂ ಹಬ್ಬಿಕಂಡ್ ಇದ್ದವೆ. ಒಮ್ಮೆ ಅದರ ಹತ್ತಿ ಹೋಕೆ ಹೋವ ತಾಕತ್ತ್ ಇರವಂಗೆ, ಇತ್ತಂದ ಹತ್ತಿರೆ ಅತ್ತ ಪರ್ಲಾಂಗ್‌ಗಳ ದೂರ ಇಳಿಯಕೆ ಸಾಧ್ಯ ಉಟ್ಟು. ಅಂತಾ ದೊಡ್ಡ ಬೊಳ್ಳಿ ಅದ್. ಅಂತ ಬೊಳ್ಳಿನನೇ ಪಿಜಿನ ಹತ್ತಿದ್ದದ್. ಒಮ್ಮೆ ಅದರ ಹತ್ತಿರೆ ಜೀವ ಉಳ್ಸಿಕಣಕ್‌ಂತ ಅವಂಗೆ ಅಂತಾ ಘಳಿಗೆಲಿನೂ ಗೊತ್ತಾಗಿತ್ತ್. ಹಾಂಗಾಗಿ ಅದರಕ್ಕಲೆ ಬೇರೆ ಹತ್ತ್‌ವಂತಾ ಮರ ಇದ್ದರೆನೂ ಅವ ಅದರ್‍ನನೇ ಆಯ್ಕೆ ಮಾಡಿಕಂಡಿತ್ತ್. ಅವನೂ ಕಾಡ್‌ನ ಮಂಜ. ಅದರ ಹೇಳಿಕೆ ಆಗದೂಂತ ನೆನ್ಸಿಕಂಡಿದ್ದರೆನೂ ಶೇಷಪ್ಪಾಚಾರಿಗಳ

ಹಕ್ಕಲೆ ಹೇಳಿತ್ತ್. ಅಪ್ಪಯ್ಯಣ್ಣ ಬಂದ್ ವಿಚಾರ್ಸಿಕಾಕನ ಎಷ್ಟ್ ಸ್ಪಷ್ಟ ಆಗಿ ಎಲ್ಲಾ ಘಟನೆಗಳ ಕಂಡದನ್ನೂ ಹೇಳಿತ್ತ್. ಅವ ಹೇಳ್ದ್ ಎಲ್ಲಾ ಸರಿ ಇದ್ದರೂ ಅಣ್ಣಿ ಊಹಿಸಿಕಂಡೂ ಇರದಿದ್ದ ಸಂಗತಿನ ಒಂದರ ಅಲ್ಲಿ ಪಿಜಿನ ಕಂಡಿತ್ತ್. ಹೌದು! ಅಪ್ಪಯ್ಯಣ್ಣ ಊಹಿಸಿಕಂಡದೇ ಅದ್. ಪಿಜಿನನೇ ನೋಡಿಕಂಡ್ ಒಂದ್ ರೀತಿಲಿ ಅವನ ಕಾದ್‌ಕಂಡೇ ಇದ್ದಾಂಗೆ ಕುದ್ದ್‌ಕಂಡ್ ಇದ್ದ ಹುಲಿ ಒಮ್ಮೆನೇ ಎದ್ದ್ ನಿತ್ತಿತ್ತ್. ಅದ್ ಅಲ್ಲಿಂದ ಹೊರ್ಡುವ ಸೂಚನೆ ಆಗಿರೊಕೂಂತ ಪಿಜಿನಂಗೆ ಕಂಡತ್. ಹೌದು ಅವನ ನಿರ್ಲಕ್ಷಿಸಿದಾಂಗೆ ಅದ್ ಅಲ್ಲಿಂದ ಆಚೆ ನಡ್ಯಕೆ ಸುರುಮಾಡ್ತ್. ಬಹುಷಃ ಅದ್ ಅಲ್ಲಿಂದ ಹೋದೋ ಏನೋಂತ ಅವ ನೆನ್ಸಿತ್. ಅಷ್ಟೊತ್ತಿಗೆ ಅಲ್ಲೇ ಸ್ವಲ್ಪ ದೂರಲಿ ಯಾವುದೋ ಸಣ್ಣ ಶಬ್ದ ಕೇಳ್ತ್. ಸಣ್ಣ ವಿಶಿಲ್ ಹೊಡ್ದಾಂಗೆ... ಟಿಸ್ಸ್.. ಪಿಸ್ಸ್.. ಶಬ್ದ. . ಅಲ್ಲಿವರೆಗೆನೂ ಹುಲಿನನೇ ನೋಡಿಕಂಡ ಇದ್ದವನ ಗಮನ ಅತ್ತ ಹೋತ್. ಅಲ್ಲಿ ಕಂಡತ್ ಆ ಅದ್ಭುತ ದೃಷ್ಯ. ಅದೇ... ಮೂರ್ ಹುಲಿ ಮರಿಗ, ಕಣ್ಣ್ ಬುಟ್ಟ್ ಎಷ್ಟ್ ದಿನ ಆಗಿತ್ತೋ. ಒಂದರ ಮೇಲೆ ಹತ್ತಿಕಂಡ್, ಕಚ್ಚಿಕಂಡ್, ಪಿಸ್ಸ್, ಹಿಸ್ಸಂತ ಆಟ ಆಡಿಕಂಡಿದ್ದೊ ಆ ಮುದ್ದು ಹುಲಿ ಮರಿಗ. ಅದರ ಕಂಡ ಪಿಜಿನಂಗೆ ಒಮ್ಮೆ ಕುಶಿನೂ ಒಟ್ಟಿಗೆ ಒಂದ್ ಅರ್ಗಿಸಿಕೆ ಆಗದ ಸತ್ಯನೂ ಗೊತ್ತಾತ್. ಅಂದರೆ ಹುಲಿ ಇಲ್ಲಿಂದ ಹೋದ್ಲೆಂತ. ಅವ ನೆನ್ಸಿಕಂಡದ್ ಸುಳ್ಳಾಗಿತ್ತ್. ಊರ್‌ಮೇಲೆ ಊರ್‌ಬಿದ್ದರುನೂ ಈ ಹುಲಿ ಅಲ್ಲಿಂದ ಹೋಕಿಲೇಂತ ಈಗ ಗೊತ್ತಾಗಿತ್ತ್. ಆಗ ನೆನ್ಪಾತ್ ಮನೆ, ಎಲ್ಲನೂ. ಕುಡಕಲ್ಲ್ ಬೊಟ್ಟಲಿ ಅಜ್ಜಿ ಕಾದ್‌ಕಂಡಿರ್ವೊ... ಏನ್ ಮಾಡಲಿ... ಆ ಕ್ಷಣಲಿ ನೆನ್ಸಿಕಂಡತ್ ಕುಡಕಲ್ಲ್ ಕಲ್ಲುರ್ಟಿ, ವಿಷ್ಣುಮೂರ್ತಿ ಕಾಪಾಡೀಂತ. ಅದ್ ಆ ದೇವ್ರಿಗೆ ಮುಟ್ಟಿತೋ ಏನೋ.... ಸುಮಾರ್ ಅದೇ ಸಮಯಲಿ ಬಾರದ ದನದ ಬಗ್ಗೆ ವಿಚಾರ್ಸಿಕೆ ಕಳ್ಗಿ ಶೇಷಪ್ಪಾಚಾರಿಗ ಮೇಪತ ಮಕ್ಕಳ ಕಡೆಗೆ ಹೊರ್ಟಿದ್ದೊ. ಎರ್ಡ್ ದಿನಂದ ಮನೆಲಿಲ್ಲದೆ ಕರಿಕೆ ಅತ್ತ ಕಾಡ್ ಹತ್ತಿದ್ದ ಅಪ್ಪಯ್ಯಣ್ಣ ಸರಿಸುಮಾರ್ ಅದೇ ಹೊತ್ತ್‌ಗೆ ಮನೆಗೆ ಬಂದ್ ಕುದ್ದ್ ಬೆಡಿನ ಒರ್ಸಿಕಂಡಿದ್ದೊ. ಒಂದ್ ರೀತಿಲಿ ಎಲ್ಲವ್ಕೆನೂ ಒಂದ್ ಬಿಡುಗಡೆ ಆದಾಂಗೆ ಆಗಿತ್ತ್. ಮೋರೆಗೆ ನೀರ್ ಹಾಕಿ, ಅವ್ಲಕ್ಕಿ ತಿಂದ್ ಚಾ ಕುಡ್ದ್ ಆಕನ ಪಿಜಿನ ಹೃದ ಎಷ್ಟೋ ಗೆಲುಆಗಿತ್ತ್. ಅಣ್ಣಿ ಹೇಳಿ ಮುಗ್ಸಿದ್ದ ಕತೆನ ಮುಂದೆದರ ಅಂವ ಎಲ್ಲವ್ಕೂ ಹೇಳ್ತ್. ಮರಿ ಹಾಕಿದ ಹುಲೀಂತ ಎಲ್ಲವ್ಕೂ ಗೊತ್ತಾತ್. ಮರ ಹತ್ತಿದ ಮೇಪತಂದಾಗಿ ಸೇರ್ದವ್ಕೆ ಎಲ್ಲವ್ಕೂ ಗೊತ್ತಾತ್. ಮರ ಹತ್ತಿದ ಮೇಪತಂಗಾಗಿ ಸೇರ್ದವ್ಕೆ ಎಲ್ಲವ್ಕೂ ಸುರ್‌ನಷ್ಟ್ ಉಮೇದ್ ಇತ್ಲೆ. ಯಾಕೇಂತೇಳ್ರೆ ಸತ್ತುಟೋ ಬದ್ಕಿಟೋಂತ ಇದ್ದವ ಈಗ ಕಣ್ಣ್ ಎದ್‌ರ್ಗೇನೇ ಇತ್ತ್. ಇನ್ನ್ ಯಾಕೆ ಅದರ ಹುಡ್ಕಿಕಂಡ್ ಹೋದುಂತ ಕೆಲವರ ಮನ್ಸಲಿ ಬಾತ್. ಅಪ್ಪಯ್ಯಣ್ಣನ ಯೋಚನೆಗೂ

ಅದ್ ಬಂದಿತ್ತ್. ಆದರೆ ಇತ್ತೀಚೆಗೆ ಜಾನುವಾರ್ ಕಳ್ಕಂಡಿದ್ದ ಶೇಷಪ್ಪಣ್ಣ, ಗಣಪ್ಪಯ್ಯಣ್ಣನವುಕೆ ಆ ಹುಲಿನ ಉಳ್ಸಿಕೆ ಬೊತ್ತ್‌ಂತ ಇತ್ತ್. ಅವರ್ದ್ ಇಬ್ಬರ್ದ್ದ ಮಾತ್ರ ಅಲ್ಲ. ಆಲೆಟ್ಟಿ ಬೈಪಾಡ್ತಾಯರ್ದ್ ಹಳ್ಳಂದಾಚೆ ಕುರುಂಜಿಯವರ್ದ್, ಇತ್ತ ತುದಿಯಡ್ಕ ಬಟ್ರ್‌ದ್, ಎಲ್ಲವೂ ಇತ್ತೀಚೆಗೆ ಆ ಹುಲಿಂದ ತೊಂದರೆ ಪಟ್ಟಿದ್ದೊ. ಒಟ್ಟ್ ಎಲ್ಲವುನೂ ಹೇಂಗಾರ್ ಆ ಹುಲಿನ ಹೊಡ್ದೇ ಹೊಡ್ಯೊಕೂಂತ ತೀರ್ಮಾನಕ್ಕೆ ಬಂದಿದ್ದೊ. ಅವರ ಎಲ್ಲವರ ಮನ್ಸ್‌ನಾಂಗೆ ಅಪ್ಪಯ್ಯಣ್ಣನೂ ಒಪ್ಪಿದೋ... ಅವ್ಕೂ ಇಂತಾ ಬೇಟೆನ ಹಿಂದೆ ಹೋವ ದಿನ ಈ ಹಿಂದೆ ಬಂದಿತ್ಲೆ. ಅವ್ಲಕ್ಕಿ ಬಾಳೆ ಹಣ್ಣ್ ತಿಂದ ಪಿಜಿನ ಈಗ ಹುಶಾರಾಗಿತ್ತ್. ಕತ್ತಲೆ ಇಡೀ ಒಬ್ಬನೇ ನಿದ್ದೆ ಇಲ್ಲದೆ ಪಲ್ಲೆಕಾಯಿ ಬೊಳ್ಳಿಲೇ ಕಾಲ ಕಳ್ದವ ಅಂವ ಆಗಿದ್ದರೂ ಅವನ ಮೋರೆಲಿ ಈಗ ಆ ನಿತ್ರಾಣ ಕಾಣ್ತಿತ್ಲೆ. ಅಂವ ಅಪ್ಪಯ್ಯಣ್ಣನ ಹಕ್ಕಲೆ ಹೇಳಿತ್ತ್. ನಾ ನಿಮ್ಮೊಟ್ಟಿಗೆ ಬನ್ನೆ. ಎಲ್ಲಿ ಅದ್ ಉಟ್ಟೂಂತ ನಾನೇ ತೋರ್ಸಿಕೊಡುವೇಂತ ಧೈರ್ಯಲೇ ಹೇಳಿತ್ತ್. ಕಡೆಗೂ ಎಲ್ಲವೂ ಒಂದ್ ಒಮ್ಮತದ ತೀರ್ಮಾನಕ್ಕೆ ಬಂದ್ ಅಲ್ಲಿಂದ ಹೊರ್ಟೊ.

ಅಪ್ಪಯ್ಯಣ್ಣ ಅವರ ಬೆಡಿಗೆ ತೋಟೆಗಳ ತುಂಬ್ಸಿಕಂಡೊ. ಅವರ ತೋಟೆ ಚೀಲಲಿ ಇದ್ದದ್ ಇಂಗ್ಲಿಷ್ ಮತ್ತೆ ಜರ್ಮನಿ ತೋಟೆಗ. ಅದುನೂ ಒಂದೊಂದು ರೀತಿನ ತೋಟೆಗ. ಅದರ್ಲಿ ಎಲ್.ಜಿ.ಗ ಗುಂಡ್‌ಗ ಇದ್ದೊ. ಗುಂಡ್‌ಗಳಲಿನೂ ಬೇರೆ ಬೇರೆ ತರ, ಸ್ಪರಿಕಲ್ ಬಾಲ್, ಲಿತಾಲ್ ಬಾಲ್. ಎಲ್. ಜಿಗಳಲಿನೂ ಎರಡೂವರೆ ಇಂಚ್, ಎರಡ್‌ಮುಕ್ಕಾಲ್ ಇಂಚ್‌ನ ಅಲ್ಪಾಮೆಕ್ಸ್. ಗ್ರೇಂಡ್ ಪಿಕ್ಸ್ ತರದವು. ಅಣ್ಣ ತಮ್ಮಂದರ್ಗೆ ತೋಟೆಗಳ ಅದರ್ಲೂ ಬೇರೆ ಬೇರೆ ತರದ ತೋಟೆಗಳ ಹಿಸಿಕಂಬೊದು ಒಂದ್ ಹವ್ಯಾಸ ಆಗಿತ್ತ್. ಯಾಗೊಳೂ ಪ್ಯಾಕ್‌ಗಟ್ಲೆ ತೋಟೆಗ ಅವರಕ್ಕಲೆ ಇರ್ತಿದ್ದೊ. ಬೇಟೆ ಒಂದರ್ಲಿ ಹಾರುವ ಹಕ್ಕಿನ ಹೊಡ್ದದರ ಕಂಡ ಬಿಳಿಮೊರೆ ಅಪ್ಪಯ್ಯಣ್ಣಂಗೆ ಒಂದ್ ಪ್ಯಾಕ್ ಎಲಿ ಕಂಪನಿ ತೋಟೆ ಕೊಟ್ಟಿತ್ತ್. ಅದರ ಒಂದ್ ಪ್ರಶಸ್ತಿನಾಂಗೆ ಅವು ಹಿಸಿಕಂಡಿದ್ದೊ. ಇಂದ್ ಯಾಕೋ ಅದೇ ತೋಟೆನ ತುಂಬಿಸಿದೊ. ಅವೆರಡೂ ಅಲ್ಪಾಮೆಕ್ಸ್ ತೋಟೆಗ. ಹುಲಿ ಇರುವ ಜಾಗೆನ ತೋರ್ಸಿಕೆ ಪಿಜಿನ ಇತ್ತ್. ಅಣ್ಣಿನೂ ಇತ್ತ್. ಹೇಂಗೂ ಹುಲಿ ಎಲ್ಯುಟ್ಟುಂತ ಗೊತ್ತಿದ್ದ ಕಾರಣ ಜಾಸ್ತಿ ಜನ ಬೇಡ, ಬೆಡಿ ಇದ್ದವು ಒಂದ್ ನಾಲ್ಕ್ ಜನ ಇದ್ದರೆ ಸಾಕ್ ಕಾಡ್ ಹೊಡ್ಯಕೆ ಇಲ್ಲೆಲೆಂತ ಅಪ್ಪಯ್ಯಣ್ಣ ಹೇಳ್ದರ ಎಲ್ಲವೂ ಒಪ್ಪಿದ್ದೊ. ಮರಿ ಹಾಕಿದ ಹುಲೀಂತ ತಿಳ್ದಮೇಲೆ ಕೆಲವು ಒಟ್ಟಿಗೆ ಹೋಕೆನೂ ಹೆದ್ರಿಕಂಡಿದ್ದೊ. ಕೈಲಿ ಬೆಡಿ ಇಲ್ಲದವೂಂತ ಹೇಳ್ರೆ ಪಿಜಿನ ಮತ್ತೆ ಅಣ್ಣಿ ಮಾತ್ರ. ಶೇಷಪಣ್ಣ, ಗಣಪ್ಪಯ್ಯಣ್ಣ ಮತ್ತೆ ಚಳ್ಳಂಗಾರ್ ಶಿವಣ್ಣಣ್ಣನ ಹಕ್ಕಲೆ ಬೆಡಿ ಇತ್ತ್. ಕಾಡ್ ದಾರಿಂದ ಕಾಡ್‌ಗೆ ತೆಲ್ಗ್‌ವಲ್ಲಿ ನಿತ್ತ್ ಹೇಂಗೆ ಏನೂಂತ ಮಾತಾಡಿಕಂಡೊ. ಅಪ್ಪಯ್ಯಣ್ಣಂಗೆ

ದಾರಿ ತೋರ್ಸಿಕಂಡ್ ಪಿಜಿನ ಒಟ್ಟಿಗೇ ಮುಂದೆ ಹೋದ್ರೂಂತಳೂ ಅವರ್ದ ಸೊಲ್ಪ ಹಿಂದೆ ಅಣ್ಣಿ ಹೈದ ಸಿಡಿಹಾಕಿದ ಕರೆಲಿ ಶೇಷಪ್ಪಣ್ಣ ಒಟ್ಟಿಗೆ ನಿಲ್ಲುದೂಂತಳೂ, ಸರಿಸುಮಾರ್ ಹುಲಿ ಇರುವ ಅಂದಾಜ್‌ನ ಎಡ್ದ ಮತ್ತೆ ಬಲ್ದಪುಡೆ ಇರುವ ಪ್ರಾಣಿಗ ದಾಟುವ ಗಂಡಿಗಳ್ಲಿ ಉಳ್ದವು ಬಿಲ್ಲ್‌ಗೆ ನಿಲ್ಲುದೂಂತ ತೀರ್ಮಾನ ಮಾಡ್ರೊ. ಆ ಎರ್ಡ್ ಗಂಡಿಗಳೂ ಹುಲಿ ಇರ್ವ ಜಾಗೆಂದ ಸುಮಾರ್ ಪರ್ಲಾಂಗ್‌ದಂಳೂ ದೂರ ಇತ್ತ್. ಅವು ಅಲ್ಲಿಗೆ ಸೇರಿಕೆ ಎಷ್ಟ್ ಸಮಯ ಬೇಕೋ ಅಷ್ಟೊತ್ತ್ ಸುಮ್ಮನೆ ನಿತ್ತ್‌ಕಂಡಿದ್ದವು, ಮೆಲ್ಲ, ಮೆಲ್ಲಂತ ಹೇಳ್ರೆ ಒಂದ್ ದರ್ಗ್‌ನೂ ಸದ್ದ್ ಮಾಡದಾಂಗೆ ನಡ್ಯಕೆ ಸುರುಮಾಡ್ರೊ. ಅಣ್ಣಿನ ಸಿಡಿ ಹಾಕಿದ ಜಾಗೆನ ದೂರಂದಳೇ ಅವ ತೋರ್ಸಿತ್. ಶೇಷಪಣ್ಣನ ಮತ್ತೆ ಅಣ್ಣಿನ ಅಲ್ಲಿ ನಿಲ್ಸಿ ಅಪ್ಪಯ್ಯಣ್ಣನೂ ಪಿಜಿನನೂ ಮುಂದೆ ನಡ್ರೊ. ಇಲ್ಲಿವರೆಗೆ ಎಲ್ಲನೂ ಸರಿಯಾಗಿನೇ ಇತ್ತ್. ಆದರೆ ಈಗ ಮುಂದೆ ಹಿಸುವ ನಡೆನ ಹೆಜ್ಜೆ ಹೆಜ್ಜೆಗೂ ಅಪಾಯ ಉಟ್ಟೂಂತ ಇಬ್ಬರಿಗೂ ಗೊತ್ತಿತ್ತ್. ಇಲ್ಲಿ ಪಿಜಿನನ ಧೈರ್ಯ ಮೆಚ್ಚೊಕೇ. ಕತ್ತಲೆ ಇಡೀ ಮರಲಿ ಪ್ರಾಣಭಯಲಿ ಕಳ್ದವ ಈಗ ಮತ್ತೆ ಅದೇ ಕಡೆ ಹೋದೂಂತ ಹೇಳ್ರೆ ಅದ್ ಸಾಮಾನ್ಯ ಅಲ್ಲ. ಅಂದರೂ ಉಮೇದ್‌ಲಿ ಅವ ಹೊರ್ಟಿತ್ತ್. ಅಪ್ಪಯ್ಯಣ್ಣಂಗೆ ಧೈರ್ಯ ಇತ್ತ್. ಕೈಲಿ ಬೆಡಿ ಇತ್ತ್. ಗುರಿತಾಂಗುಸುವ ಚಾಕಚಕ್ಯತೆ ಇತ್ತ್. ಅಲ್ಲದೇ ಎಷ್ಟೆಷ್ಟೋ ಹುಲಿಗಳ ಹೊಡ್ದ ಅನುಭವದ ಬಂಡಾರನೇ ಅವ್ಕೆ ಇತ್ತ್. ಅಂದರೂ ಒಂದ್ ಕ್ಷಣ ನಿತ್ತವು ಒಂದ್ ದೀರ್ಘ ಉಸಿರೆಳ್ದೆ ಕುಡಕಲ್ಲ್ ತೊಂಡಚ್ಚಮಾರ್ರೇ.. ಅವರ ಬೇಟೆ ದೆವ್ವನ ನೆನ್ಸಿಕಂಡೊ. ಕುಡಕಲ್ಲ್ ವಿಷ್ಣು, ಪಾಶಾಣಮೂರ್ತಿಗಳ, ಧರ್ಮ ದೆವ್ವಗಳ, ಬಡ್ಡಡ್ಕದ ಬೊಡ್ಡಜ್ಜಂಗೆ ಮನ್ಸ್‌ಲೇ ಕೈ ಮುಗ್ರೊ. ದೂರಲಿ ಎದುರ್‌ನ ದೊಡ್ಡ ಹಳ್ಳದ ಆಚೆನ ಬೂಡ್ ಭಗವತಿನ ನೆನ್ಸಿ ಬೆಡಿನೊಮ್ಮೆ ಹಣೆಗೆ ಮುಟ್ಸಿ ಮುಂದೆ ನಡ್ಯಕೆ ಸುರುಮಾಡ್ತೋ. ಪಿಜಿನಂಗೆ ಮಾತ್ರ ಅಪ್ಪಯ್ಯಣ್ಣ ಮೇಲೆ ನಂಬಿಕೆ ಇತ್ತ್. ಅವರ ಬಗ್ಗೆ ಈ ಮುಂದೆ ಹೇಳಿ ಕೇಳಿ ಗೊತ್ತಿತ್ತ್. ಮತ್ತೆ ಅವನ ಬಗ್ಗೆನೇ ನಂಬಿಕೆ ಇತ್ತ್. ಎದ್‌ರ್ ಸಿಕ್ಕುವ ಪ್ರತಿ ಮರನನೂ ಎಲ್ಲಿಂದ ಹತ್ತಕ್‌ಂತ ಅಂದಾಜ್ ಮಾಡಿಕಂಡೇ ಹೆಜ್ಜೆ ಹಿಸ್ತಿತ್ತ್. ಅವರ ಎದ್ರ್ ಈಗ ನೂರ್ ಮಾರ್ ದೂರಲಿ ಅವರ ಗುರಿನ ಜಾಗೆ ಇತ್ತ್. ಅಪ್ಪಯ್ಯಣ್ಣನ ಹೆಜ್ಜೆನ ಮೇಲೆ ಹೆಜ್ಜೆ ಹಿಸಿಕಂಡ್ ಇದ್ದ ಪಿಜಿನ ಹಿಂದೆಂದ ಅವರ ಹೆಗಲ್ ಮುಟ್ಟಿತ್. ಬೇರೆ ಎಲ್ಲಿ ಯಾರ್ ಹೇಳ್ರೇನೂ ಅವರ ಅಂವ ಮುಟ್ಟಿಕಿತ್ಲೆ. ಆದರೆ ಇಂದ್ ಹಾಂಗಲ್ಲ. ಹುಲಿಗೆ ಇಬ್ಬರೂ ಒಂದೇ. ಆದರೆ ಅಪ್ಪಯ್ಯಣ್ಣಂಗೆ ಅಂತ ಆಚಾರ ಯಾವುದೂ ಇತ್ಲೆ. ಪಿಜಿನ ಬೆನ್ನ್ ಮುಟ್ಟಿದ ತಕ್ಷಣ ಅಲ್ಲಿಯೇ ನಿತ್ರೊ. ಪಿಜಿನ ಎದ್‌ರ್ ಕೈ ತೋರ್ಸಿತ್. ಅವ ಹತ್ತಿದ ಪಲ್ಲೆ ಬೊಳ್ಳಿನ ಕಡೆಗೂ ಕೈ ತೋರ್ಸಿತ್. ಮಾತ್‌ನ ಅವಶ್ಯ ಇತ್ತ್‌ಲೆ. ಅಪ್ಪಯ್ಯಣ್ಣಂಗೆ ಎಲ್ಲಾ ಗೊತ್ತಾಗಿತ್ತ್.

6

****

ಬಾಬಣ್ಣಣ್ಣ ಒಮ್ಮೆನೇ ಹಳೇ ನೆನ್ಪ್‌ಗಳ್‌ಂದ ಹೊರಗೆ ಬಂದೋ. ನಾರಾಯಣ ಅವ ಮಾಡ್ದರ ಹೇಳಿ ಮುಗ್ಸಿತ್ತ್. ಅಂವ ಕಾದ್‌ಕಂಡ್ ಇತ್ತ್. ಅವನ ಸಮಸ್ಯೆಗೆ ಈಗ ಪರಿಹಾರ ಬೇಕಿತ್. ಈಸಿಚೆಯರ್‌ಲಿ ಕುದ್ದ್‌ಕಂಡ್ ಇದ್ದ್ ರಾಮಯ್ಯಜ್ಜ ಮಂಜನ ಕಡೆ ತಿರ್ಗಿ ಕೇಳ್ದೊ. "ಎಂತದ್ ಮಾಡ್ದು ಅಣ್ಣ ಈಗ..? ನಾರಾಯಣ ಮತ್ತೆ ಹೇಳ್ತ್. "ಎಂತಾರುನೂ ಕತ್ತಲೆ ಬೊಳ್ಪು ಆಕೆ ಮುಂದೆನೇ ಆಕು". ಕುಞ್ಞಣ್ಣ ಬಟ್ಟಂಗಾಯಿಗೆ ಹೋಕೆ ಕೊಡಿಕಾಲ್‌ಲಿ ನಿತ್ತಿತ್ತ್. "ಅಂದರೆ ನಾ ಹೋಕೋ ಮೊಪ್ಪ" ಅಪ್ಪನ ಹಕ್ಕಲೆ ಕೇಳ್ತ್. ಬೇಡ ನೀ ಹೋದು ಬೇಡಂತ ಅವನ ಆಸೆನ ಅಲ್ಲಿಯೇ ಮುರ್ಬಿಸಿ, ನಾರಾಯಂಗೆ ಹೇಳ್ದೊ. " ನೀ ಈಗಳೇ ವೆಂಕಪ್ಪನ, ಗೋಪಾಲನ ಕರ್ಕಂಡ್ ಹೋಗಿ ಅದರ ಚರ್ಮ ಬುಡ್ಸಿ, ಚರ್ಮ ಬುಡ್ಸುದು ನಿಂಗೆ ಗೊತ್ತುಟಲೆಂತ ಕೇಳ್ದೋ. ಇಲ್ಲೆ ಅಣ್ಣ ನಂಗೆ ಹುಲಿ ಚರ್ಮ ಬುಡ್ಸಿ ಗೊತ್ತಿಲೇಂತ ಅವ ಹೇಳ್ತ್. ಕುತ್ತಿಗೆ ಅಡಿಪುಡೆಂದ ಬೀಲದ ವರೆಗೆ ಕೊಯ್ದಿ, ಕಾಲ್‌ಗಳನೂ ಒಳಗೆ ಪುಡೆಂದ ಸೀಳಿ. ಚರ್ಮನ ಬುಡ್ಸಿಕಂಡ್ ಬಂದ್ ತಲೆ ಹಕ್ಕಲೆ ಇಡೀ ಬಾವಾಂಗೆ ಬನಿಯನ್ ತೆಗೆವ ರೀತಿಲಿ ಬುಡ್ಸ್. ಚರ್ಮಲಿ ಮಾಸ ಇರದೆ. ಮತ್ತೆ ಚರ್ಮ ಒಟ್ಟೆ ಆಕೆ ಆಗದ್. ಅದರ ಮಾಸಲಿ ಚೆರ್ಬಿ ಇರ್ದು ಅದರ ಎಲ್ಲ ಹಿಸಿಕಂಡ್ ಕಾಸ್, ತುಪ್ಪ ಸಿಕ್ಕಿದೆ. ಹುಲಿನ ತುಪ್ಪ ಮೊದ್ದ್‌ಗೆ ಬೇಕಾದೆ. ಎಲ್ಲದನ್ನೂ ಬುಡ್ಸಿ ಬುಡ್ಸಿ ಹೇಳ್ದೊ. "ಇಂದ ಹಾಂಗೇನೆ ಅದರ ದವ್ಡೆನ ಕಡ್ಡ್ ಎಲ್ಯಾರ್ ಕಾಡ್‌ಲೇ ಗೊಸರಿಲಿನೋ, ಕಂಪಲಿನೋ ಹುಗ್ದ್ ಹಿಸ್. ಅದರ ಹಲ್ಲ್‌ಗಳ ಒಂದ್ ಹತ್ತ್ ದಿನ ಕಳ್ದ ಮೇಲೆ ಕಿತ್ತ್ ತೆಕಣಕ್ ಬಲಾ.... ಹಾ । ಅದರ ಎಲ್ಲಾ ಉಳ್ದದರ ಕಾಡ್‌ಲೇ ಗುಂಡಿ ತೆಗ್ದ್ ಹುಗ್ದ್ ಹಾಕಿ. ಯಾರಿಗೆನ್ನೊ ಗೊತ್ತಾಕೆ ಆಗದ್. ಚರ್ಮನ ಬುಡ್ಸಿದ ಕೂಡ್ಲೆ ಅದರ ಒಳಗೆನ ಪುಡೆಗೆ ಉಪ್ಪುನ ಹೊಡಿಮಾಡಿ ಅರ್ಶಿಣ ಹೊಡಿನ ಬೆರ್ಸಿ ಲ್ಯಾಕ್ ಉಜ್ಜ್. ಹೊರಗೆನ ರೋಮಕ್ಕೆ ತಾಂಗಿಕಾಗದ್" ಮತ್ತೆ ಅದರ ತಾಕೆ ಆದರೆ ಇತ್ತ ತಾ, ಇಲ್ಲದಿದ್ದರೆ ಅಲ್ಲಿನೇ ಬೊಳ್ಪಿ ಒಣ್ಗ್‌ಸಿಕೆ ಹಾಕ್" ಪ್ರತಿ ಅಂಶನನೂ ಬಾಬಣ್ಣ ನಾರಾಯಣಂಗೆ ಗೊತ್ತಾವಾಂಗೆ ಬುಡ್ಸಿ ಹೇಳ್ದೊ. ಅದೆಲ್ಲಾ ಅವಂಗೆ ಗೊತ್ತಿದ್ದ ವಿಷಯನೇ ಆಗಿದ್ದರೂ, ಇದ್ ಹುಲಿ. ಎಲ್ಲಿಯಾರ್ ಹಾಳಾಕೆ ಆಗದಲೇಂತ ಅವನ ಹೆದ್ರಿಕೆ ಆಗಿತ್ತ್. ಇಷ್ಟೆಲ್ಲಾ ಆಗಿ ಅಲ್ಲಿನೇ ಹೊಟ್ಟೆತುಂಬಾ ಅವಸರ ಅವಸರಲಿ ಉಂಡ್, ಅಲ್ಲಿಂದ ಒಂದ್ ಹೆಡ್‌ಲೈಟ್‌ನನೂ ಹಿಡ್ಕಂಡ್ ಹೊರ್ಟತ್. ಸೀದಾ ಅವನ ಮನೆಗೆ ಬಂದವ ಹೆಣ್ಣ್‌ಗೆನೂ ಏನೂ ಹೇಳದೇ ಆಚೆ ಈಚೆ ಮನೆಲಿದ್ದ ಅಣ್ಣ ಗೋಪಾಲಂಗೆ ಮತ್ತೆ ತಮ್ಮ ವೆಂಕಪ್ಪನೊಟ್ಟಿಗೆ ಪಿಸಿ ಪಿಸಿಂತ ಅರ್ದಮರ್ದ ಹೇಳಿ ಅವರ ಕರ್ಕಂಡ್

ಬಟ್ಟಂಗಾಯಿಕಡೆ ನಡ್ತ್. ನಾರಾಯಣ ಹೋಗಿ ಸುಮಾರ್ ಹೊತ್ತ್ ಆಗಿದ್ದರೂ ಬಾಬಣ್ಣಂಗೆ ನಿದ್ದೇನೇ ಬಾತ್ಲೆ. ಅವರ ನೆನ್ಪು ಮತ್ತೆ ಹಿಂದೆ ಹಿಂದೆ ಹೋಗಿ ಬೋಜಪ್ಪನ ಆ ಹುಲಿ ಬೇಟೆ ಕಡೆ ನಿತ್ತತ್.

ಪಿಜಿನ ತೋರ್ಸಿದ ಕಡೆಗೆ ನೋಡ್ದ ಅಪ್ಪಯ್ಯಣ್ಣಂಗೆ ಹೃದನ ಇನ್ನ್ ಒಟ್ಟಿಗೆ ಕರ್ಕಂಡ್ ಹೋದು ಸರಿ ಕಂಡತ್ಲೆ. ಮೆಲ್ಲ ಬಾರೀ ಮೆಲ್ಲ ಅವಂಗೆ ಹೇಳ್ದೊ. ನೀ ಇಲ್ಲೇ ನಿಲ್ಲ್. ನಾ ಒಂದ್ ಹತ್ತ್ ಮಾರ್ ಹೋದ ಮೇಲೆ ಮೆಲ್ಲಂಗೆ ಒಂದ್ ಚೂರೂ ಮೊಸ್ಗದಾಂಗೆ ಮರ ಹತ್ತಿ ಒಂದ್ ಗೆಲ್ಲಲಿ ಕುದ್ರ್. ನಾ ಗುಂಡ್ ಹೊಡ್ದರೆನೂ ಕರ್ಯದೆ ಇಳಿಬಡಾಂತ ಹೇಳಿ ಕರೆಲಿದ್ದ ಬೊಳ್ಪಾಲೆ ಮರನ ತೋರ್ಸಿದೋ. ಅದೊಂದು ಸಣ್ಣ ಮರ. ನಿಜಕ್ಕೂ ಬೊಳ್ಪಾಲೆ ಮರ ಕಾಡಲಿ ದೊಡ್ಡದಾಗಿ ಬೆಳೆವಂತ ದೂಪ ಜಾತಿಗೆ ಸೇರ್ದ ಮರ. ಸೀದಾ ನೆಟ್ಟಂಗೆ ಬೆಳಿವ ಆ ಮರ ತುಂಬಾ ಗೆಲ್ಲ್ ಎಲೆಗಳಿಂದ ಜಿಗ್ಗಾಗಿದ್ದದೆ. ಅಲ್ಲದೆ ಅದರ ಗೆಲ್ಲ್‌ಗ ಏಣಿ ಮೆಟ್ಲ್‌ನಾಂಗಿದ್ದ್ ಹತ್ತಿಕೆನೂ ಸುಲಭ. ಬೆಡಿ ಈಗ ಅವರ ಹೆಗಲ್‌ಂದ ಇಳ್ದಿತ್ತ್. ಎರ್ಡ್ ಕೈಲಿನೂ ಯಾವುದೇ ಕ್ಷಣಲಿನೂ ಗುಂಡ್ ಹೊಡ್ಯಕೆ ಆವ ರೀತಿಲಿ ಬೆಡಿನ ಹಿಡ್ಕಂಡ್ ಒಂದೊಂದು ಹೆಜ್ಜೆನನೂ ಜಾಗ್ರತೆಲಿ ಹಿಸಿಕಂಡ್, ಕೇಳುವ ಒಂದ್ ಸಣ್ಣ ಶಬ್ದಗಳನೂ ಅರ್ಥಮಾಡಿಕಂಡ್, ಚಕ್ರವ್ಯೂಹನ ಗೆಲ್ಲಿಕೆ ನುಗ್ಗುವ ಯೋಧನಾಂಗೆ ಮೆಲ್ಲಂಗೆ ಮುಂದೆ ನಡ್ಯೊತಿದ್ದೊ. ಇಲ್ಲೇ। ಯಾವ ಶಬ್ದನೂ ಏನೂ ಕೇಳ್ತಿತ್ಲೆ. ಒಂದ್ ಹತ್ತ್ ಮಾರ್ ನಡ್ದವು ಹಿಂದೆ ತಿರ್ಗಿ ನೋಡ್ದೋ... ಪಿಜಿನ ನಿತ್ತಲ್ಲಿ ಕಂಡತ್ಲೆ. ಮೇಲೆ ನೋಡಿರೆ ಅಂವ ಆಗಳೇ ಮರಹತ್ತಿ ಆಗಿತ್ತ್. ಅವನ ಜಾಗ್ರತೆ ಅಂವ ಮಾಡಿಕಂಡಿತ್ತ್. ಬೇಟೆಲಿ ಎಷ್ಟೇ ಅನುಭವಿ ಆದರೂ, ಎಷ್ಟೋ ಹುಲಿಗಳ ಹೊಡ್ದಿದ್ದರೂ ಇಂದ್ ಹಾಂಗೆ ಅಲ್ಲ. ಮರಿಹಾಕಿದ ಹುಲಿನ ಹುಡ್ಕಿಕಂಡ್ ಅದ್ ಮಲ್ಗಿದಲ್ಲಿಗೇ ಹೋಗ್ತಿದ್ದುರ್. ಒಂದ್ ಸಣ್ಣ ಹೆದ್ರಿಕೆ. ಎಷ್ಟೇ ಇಲ್ಲೇಂತ ಇದ್ದರೂ ಮನ್ಸ್‌ಲಿ ಇತ್ತ್. ಮುಂದೆ ಬಂದೊ... ಇಲ್ಲೆ ಯಾವುದೇ ಶಬ್ದ ಇಲ್ಲೆ. ಈಗ ಅವು ಸರಿಸುಮಾರ್ ಪಿಜಿನ ಹತ್ತಿದ ಬೊಳ್ಳಿನ ಹಕ್ಕಲಿದ್ದೊ. ಇಲ್ಲೇ, ಏನೂ ಗೊತ್ತಾದುಲೆ. ಸುಮಾರ್ ಹೊತ್ತ್ ಹಾಂಗೇ ನಿತ್ತೊ... ಇಲ್ಲೆ ಎಂತದೂ ಇಲ್ಲೆ. ಹುಲಿ ಎಲ್ಯಾರ್ ಮರಿಗಳ ಕರ್ಕಂಡ್ ಅಲ್ಲಿಂದ ಹೋಗಿರ್ದೋ...? ಮುಂದೆ ಬಲ್ಲೆಗ ಅಲ್ಲಾಡದೇ ಹೆಜ್ಜೆ ಹಿಸಿಕೆ ಆಗ್ತಿತ್ಲೆ.. ಏನ್ ಮಾಡ್ದು. ಒಂದ್ ಸಣ್ಣ ಸಂಶಯ ಮನ್ಸ್‌ಗೆ ಬಾತ್... ಅದ್ ದೊಡ್ಡದಾಗ್ತಾ ಹೋತ್. ಎಲ್ಲಿಯಾರ್ ಕುದ್ದ್‌ಕಂಡ್ ಹುಲಿ ನನ್ನನೇ ನೋಡ್ತಾ ಉಟ್ಟೋಂತ..... ಒಂದ್ ಸಣ್ಣ ಸಂಶಯ ಅವರ ಒಮ್ಮೆ ನಡ್ಗಿಸಿತ್. ಒಂದು ವೇಳೆ ಆ ಅವರ ಸಂಶಯ ನಿಜನೇ ಆಗಿದ್ದರೆ ಅವ್ಕೆ ಯಾವ ಅವಕಾಶನೂ ಇತ್ಲೆ. ಅವು ಹೆಜ್ಜೆ ಕದಲ್ಸಿಕೆ ಮುಂದೆ ಹುಲಿ ಅವರ ಹಿಡ್ಯಕೆ ಸಾಧ್ಯ ಇತ್ತ್. ಸುಮ್ಮನೆ

ಒಂದೆರಡ್ ಕ್ಷಣ ಹಾಂಗೇನೇ ನಿತ್ತೊ. ಇಲ್ಲೆ ಹಾಂಗೇನಿಲ್ಲೇಂತ ಕಂಡತ್. ಅವು ಒಂದ್ ಹೆಜ್ಜೆ ತೆಗಿದರ್‌ಂದ ಸುಲಭಲಿ ಒಂದ್ ಕೈ ಎತ್ತಿ ತಲೆಂದ ಸ್ವಲ್ಪ ಮೇಲೆ ಹಿಡ್ಯಕೆ ಅಡ್ಡ ಹೋದ ಪಲ್ಲೆಕಾಯಿ ಬೊಳ್ಳಿ ಇತ್. ಯಾಕೆನೋ ಒಂದ್ ಹೆಜ್ಜೆ ಹಿಸಿಕೆನೂ ಮನ್ಸಾತ್‌ಲೆ. ಹೌದು। ಅವು ನೆನ್ನ ದೆವ್ವ ದೇವ್ರ್‌ಗ ಅವರ ಕಡೆ ಇದ್ದೊ. ಅವರ ನಿರ್ಧಾರ ಬೊಳ್ಳಿಗೆ ಹತ್ತುದೇ ಆಗಿತ್ತ್. ಮತ್ತೆ ಯೋಚಿಸಿಕೆ ಸಮಯ ಇತ್ಲೆ. ಇದ್ದ ಸಮಯ ಸಾವು ಬೊದ್‌ಕನ್ ಮಧ್ಯದ ಅರೆಕ್ಷಣ ಮಾತ್ರ. ಒಮ್ಮೆನೇ ಹಾರಿ ಅಡ್ಡ ಇದ್ದ ಬೊಳ್ಳಿಗೆ ಕೋಸಿಕಂಡಾಗೆ ಆಗಿ ತಿರ್‍ಗಿಕಾಕನ ಬೊಳ್ಳಿನ ಮೇಲಿದ್ದೊ... ಅವು ಹತ್ತಿದೋ.... ಕುಡೆಕಲ್ಲ್ ದೆವ್ವಗ ಅವರ ಮೇಲೆ ಎಳ್ಕಂಡದೋ,ಅವು ಈಗ ಆ ಸದೃಢ ಬೊಳ್ಳಿನ ಮೇಲಿದ್ದೊ. ಅದ್ ಹೇಂಗೆ ಅಲ್ಲಿಗೆ ಸೇರಿ ಹೋದೊನೋ. ಒಂದ್ ಕೈಲಿ ಬೆಡಿ ಹಿಡ್ಕಂಡೂ ಅವು ಯಾವುದೇ ಆಯತಪ್ಪದೆ ಬೊಳ್ಳಿನ ಹಿಡ್ದ್ ನೇತಾಡಿ ಹತ್ತಿದೋ. ಎದೆನ ಬಡಿತ ಒಂದ್ ಮಟ್ಟಕ್ಕೆ ನಿಲ್ಲುವವರೆಗೂ ಸುಮ್ಮನೇ ಹಾಂಗೇ ಇದ್ದೊ.

ಮಕ್ಕಳಿಗೆ ಹಾಲ್‌ಕೊಟ್ಟ್ ಬೊಳ್ಪುಗೆನೇ ಹೊಡ್ದ್ ಹಾಕಿದ ಹಸುನ ಮೇಲೆಂದ ಮೇಲೆ ತಿಂದ್ ಬಂದಿದ್ದ ಹುಲಿ ಮತ್ತೆ ಬೇಟೆನ ಅದ್ ಇದ್ದಲ್ಲಿಗೇ ಎಳ್ದ್ ತರೋಕೂಂತ ಹೊರ್‍ಟಿತ್ತ್. ಅಂತ ಸಮಯಲೇ ಪಿಜಿನ ಅದ್ ಇದ್ದ ಜಾಗೆಗೆನೇ ಗೊತ್ತಿಲ್ಲದೇ ಬಂದಿತ್ತ್. ಒಂದ್ ಕಡೆ ಆಹಾರ, ಮತ್ತೊಂದ್ ಕಡೆ ಮರಿಗ, ಅಂತ ಪರಿಸ್ಥಿತಿಲಿ ಹಾಳ್ ಶನಿ ಹಿಡ್ದವರಾಂಗೆ ಪಿಜಿನ ಬಂದಿತ್ತ್. ಅವನ ಹೆದ್ರ್‌ಸಿ ಓಡ್ಸಿಕೆಂತ ನೆನ್ಸಿರೆ ಅಂವ ಮರ ಹತ್ತಿತ್ತ್. ಮರದ ಮೇಲೆ ಅಂವ, ಕೆಳಗೆ ಮರಿಗ, ಮರಿಗಳ ಬುಟ್ಟ್ ಹೋದರೆ, ಅವ್ಕೆ ಏನಾರ್ ಆದರೆ? ಸುಮ್ಮನೆ ಕುದ್ದರೆ ಹೊಟ್ಟೆ ಕೇಳ್ದುಲೆ. ಇದ್ದ ಬದ್ದ ಹಾಲ್‌ನನೂ ಜಬ್ಬಿ ಜಬ್ಬಿ ಮರಿಗ ಎಳ್ದಮೇಲೆ ಅದರ ಮೊಲೆಗಳೂ ಜಬ್ಬ್ ಆಗಿದ್ದೊ. ಮರದ ಮೇಲಿದ್ದವನನೇ ಹಿಡ್ದ್ ತಿಂಬಂತ ಕೋಪ ಬಂದಿತ್ತ್. ಆದರೆ ಅಂವ ಕೆಳಗೆ ಇಳಿದುಲೆ, ಅದ್ಕೆ ಮೇಲೆ ಹತ್ತಿಕೆ ಆದುಲೆ. ಕಾತ್, ಕಾತ್, ಬೊಳ್ಪುನೊರೆಗೆನೂ ಕಾತ್. ಅಂವ ಈಗ ಮೇಲೆ ಕಣ್ಣಿಗೆ ಕಾಣ್ತಿತ್ಲೆ. ಮೇಲೆ ಇದ್ದ ಮೊಯ್ಸಿನ ಸಂಗತಿ ಏನೂ ಗೊತ್ತಾಕ್ತಿತ್ಲೆ. ಕಡೇಗೆ ಹುಲಿ ಒಂದ್ ತೀರ್ಮಾನಕ್ಕೆ ಬಂದಿತ್ತ್ ಬೇಗ ಹೋಗಿ ಏನಾರ್ ತಿಂದ್‌ಕಂಡ್ ಬನ್ನೇಂತ. ಮರದ ಮೇಲಿದ್ದ ಪಿಜಿನ ಅಲ್ಲಿಂದಳೇ ಅದರ ನೋಡ್ತಿತ್ತ್. ಅಂವ ಹುಲಿ ಎಲ್ಲಿಯಾರ್ ಸೊಲ್ಪ ಆದಉೂ ತಪ್ಪಿದೆನೋಂತಳೇ ಕಾಯ್ತಿತ್ತ್. ಆದರೆ ಅವ ಇದ್ದ ಜಾಗೆ ಹುಲಿಗೆ ಕಾಂಬತಿತ್ಲೆ. ಹಾಂಗೆ ಕಡೇ ತೀರ್ಮಾನಕ್ಕೆ ಬಂದ ಹುಲಿ ಮರಿಗಳ ಬುಟ್ಟ್ ಅಲ್ಲಿಂದ ಹೊರ್‍ಟಿತ್ತ್. ಹುಲಿ ಮತ್ತು ಅಂವ ಇದ್ದ ಕಡೆಂದ ಕೆಳಗೆನ ಪುಡೆ ಒಂದ್ ಸಣ್ಣ ಗೊಡಲ್, ಅದರತ್ತ ಇಳ್ದ ಹುಲಿ ಸ್ವಲ್ಪ ಹೊತ್ತ್ ಕಂಡತ್‌ಲೆ, ಮತ್ತೆ ನೋಡಿಕನ

ಅದ್ ಕೆಳಗೆನ ಗೊಡಲ್‌ನ ದಾಟಿ ಕುತ್ತ ಮೇಲೆ ಹತ್ತ್‌ತಿತ್ತ್. ಇದರ್ಂದ್ರ ಒಳ್ಳೆ ಸಮಯ ಸಿಕ್ಕಿಕಿಲೆಂತ ಅವಂಗೆ ಗೊತ್ತಾಗಿತ್ತ್. ಅಲ್ಲಿಂದ ಸೀದ ಸರಸರಂತ ಮರಂದ ಇಳ್ತ್. ಪೂರಾ ಬೊಚ್ಚಿ ಹೋಗಿತ್ತ್. ಆದರೆ ಅಂತಾ ಸಮಯಲಿನೂ ಅವನ ಮನ್ಸ್‌ಗೆ ಒಂದ್ ಕೆಟ್ಟ ಯೋಚನೆ ಬಂದಿತ್ತ್. ಈ ಮರಿಗಳ್ಲಿ ಒಂದರಾರ್ ಹಿಡ್ಕಂಡರೆ ಹೇಂಗೇಂತ. ಒಂದ್ ಮನ್ಸ್ ಹೇಳಿತ್ತ್. ಸಾಯೊಕುಂತ ಆದರೆ ಹಿಡ್ಕಾಂತ. ಮೇಲೆಂದ ಇಳ್ದವ ಅತ್ತನ ಪುಡೆ ಗುಡ್ಡೆಲಿ ಹುಲಿ ದಾಟುದರನೇ ನೋಡ್ತಿತ್ತ್. ಇನ್ನ್ ಹೇಂಗಿದ್ದರೂ ಸಿಕ್ಕಿಕಿಲೆಂತ ಗೊತ್ತಾಗಿತ್ತ್. ಅಲ್ಲಿಂದ ಓಡ್ರೆ ಸೀದಾ ಹಕ್ಕಲೆನ ಮನೆನೇ ಶೇಷಪ್ಪಾಚಾರಿಗಳ್ದ್. ಮತ್ತೆ ಒಂದೂ ಯೋಚನೆ ಮಾಡದೆ ಅತ್ತ ಓಡಿತ್ತ್.

ಅಪ್ಪಯ್ಯಣ್ಣ ಆ ಬೊಳ್ಳಿಗೆ ಒಮ್ಮೆ ಹಾರಿ ನೇತಾಡಿ ಹತ್ತಿದ್ದೊ. ಅದ್ ಒಮ್ಮೆ ಉಯ್ಯಾಲೆನಾಂಗೆ ಅಲ್ಲಾಡ್ತ್. ಅವು ಸರಿಯಾಗಿ ಅದರ ಮೇಲೆ ನಿತ್ತ್ ಇರಿಕಾಕನ ಆಗ ಕೇಳ್ತ್ ಒಂದ್ ಸಣ್ಣ ಶಬ್ದ. ಎಂತದೋ ಹಸ್‌ರ್ ಆಡ್ದಂಗೆನೋ, ಎಲ್ಲಿಯೋ ಯಾರೋ ಮಾತಾಡ್ದಂಗೆನೋ ಒಂದ್ ಸಣ್ಣ ಸದ್ದ್. ಒಟ್ಟಿಗೆ ಒಂದ್ ಸಣ್ಣ ಕೀಚಲ್ ಸ್ವರಲಿ ಪೇಪೆ ಉರ್‍ಗಿದಾಂಗೆನೋ, ಕೊತ್ತಿಮರ್ಪ್ಲಾಂಗೆನೋ, ಒಟ್ಟಿಗೆ ಟುಸ್ಸ್.....ಪುಸ್ಸ್.... ಗೊತ್ತಾಗಿ ಹೋತ್ ಅಪ್ಪಯ್ಯಣ್ಣಂಗೆ, ಉಟ್ಟು. ಖಂಡಿತಾ ಉಟ್ಟು. ಎದರ್ಲಿ ಎಲ್ಲಿನೋ ಸರೀ ಗೊತ್ತಾತ್ತ್ಲೆ. ಹುಲಿ ಮರಿಗ ಒಳೋಂತ. ಕೂಡ್ಲೆ ಜಾಗ್ರತೆ ಆದೊ ಅವು. ನಿತ್ತ ಅಡ್ಡ ಬೊಳ್ಳಿ ನೆಲಕ್ಕೆ ಹಕ್ಕಲೆನೇ ಇತ್ತ್. ಅಲ್ಲಿಂದ ಏನೂ ಕಾಂಬೊದುಲೆ, ಅಲ್ಲದೆ ಅಷ್ಟ್ ಅಡಿಲಿ ಕ್ಷೇಮನೂ ಅಲ್ಲ. ಅಲ್ಲಿರ್ದು ಕ್ಷೇಮಾಂತ ಕಂಡತ್‌ಲೆ. ಅಲ್ಲಿಂದ ಸೀದಾ ಅದೇ ಬೊಳ್ಳಿನ ಹಿಡ್ಕಂಡ್ ಮೇಲೆ ಹತ್ತಿದೊ. ಸುಮಾರ್ ನೆಲಂದ ಇಪ್ಪತ್ತ್... ಇಪ್ಪತ್ತೈದ್ ಅಡಿ ಎತ್ತರಲಿ ಈಗ ಅತ್ತ ಇತ್ತನ ಗೆಲ್ಲ್‌ಗಳ ಹಿಡ್ಕಂಡ್ ಸರಿಯಾಗಿ ನಿತ್ತಿದ್ದೊ. ಈಗ ಕೆಳಗೆನ ಜಾಗೆಗ ಎಲ್ಲಾ ಸರಿಯಾಗಿ ಕಾಣ್ತಿತ್ತ್. ಮರಿಗಳ ಟುಸ್ಸ್...ಪುಸ್ಸ್ ಸರಿಯಾಗಿನೇ ಕೆಬಿಗೆ ಬೀಳ್ತಿತ್ತ್. ಅಪ್ಪಯ್ಯಣ್ಣಂಗೆ ಗೊತ್ತಿತ್ಲೆ. ಅಷ್ಟೊತ್ತಿಗೇ ಮರಿಗ ಅವರ ಕಂಡಿದ್ದೊ. ಆ ಮರಿಗಳ ಟುಸ್ಸ್..ಪುಸ್ಸ್... ಬರೀ ಶಬ್ದ ಆಗಿತ್ಲೆ. ಅವು ಅವರ ಅಮ್ಮನ ಕರ್ಯ್‌ತಿದ್ದೊ. ಕಾಡ್‌ಲೇ ಹುಟ್ಟಿದ ಮರಿಗ ಅವು. ಹುಟ್ಟಿ ದಿನ ಹದಿನೈದು ಆಗದಿದ್ದರೂ ಅವರ ಹುಟ್ಟ್‌ಲೇ ಎಲ್ಲಾ ತಿಳುವಳಿಕೆ ಅವುಕೆ ಬಂದಿತ್ತ್. ಅಪ್ಪಯ್ಯಣ್ಣ ಬೊಳ್ಳಿಗೆ ಹಾರಿ ಹತ್ತಿದ ಆ ಶಬ್ದಲೇ ಆ ಮರಿಗಳಿಗೆ ಅಪಾಯದ ಸೂಚನೆ ಸಿಕ್ಕಿತ್ತ್. ಈಗ ಹಾಂಗಲ್ಲ. ಅವು ಅವರ ಕಂಡ್ ಕಂಡಿದ್ದೊ. ಹಾಂಗಾಗಿ ಅವು ಅವರ್ದೇ ಬಾಷೆಲೋ.... ಅಲ್ಲ ಸಂದೇಶಲಿನೋ ಅಮ್ಮನ ಕರ್ಯ್‌ತಿದ್ದೊ. ಆ ಸಮಯಲಿ ಅವ್ಕೆ ಗೊತ್ತಿತ್ಲೆ. ಇದೇ ಮರದ ಮೇಲೆ ಕಾಂಬವ ಮುಂದೆನ ದಿನಲಿ ಅವರ ಅವು ಸಾಯಕನ ಮುಟ್ಟನೂ ಅವ್ಕೆ ಅಪ್ಪ, ಅಮ್ಮ, ಎರ್ಡೂ ಆಗಿರ್ದೂಂತ.

ಶಬ್ದ ಎತ್ತಂದ ಬರ್‍ತಾಉಟ್ಟೂಂತ ಅಪ್ಪಯ್ಯಣ್ಣಂಗೆ ಅಂದಾಜ್ ಸಿಕ್ಕಿತ್ತ್. ಅವು ಇದ್ದಲ್ಲಿಂದ ಏನೂ ಕಾಣ್ತಿತ್ತ್ಲೆ. ಅಲ್ಲಿಂದ ಅದೇ ಬೊಳ್ಳಿಲಿ ಸೊಲ್ಪ ಮುಂದೆ ದಾಟಿದೊ. ಎದರ್‌ನ ಬಲ್ಲೆ ಸಣ್ಣಂಗೆ ಅಲ್ಲಾಡ್ತಿತ್ತ್. ಆದರೆನೂ ಎಂತದೂ ಕಾಂಬೊದುಲೆ. ಆದರೆ ಒಂದ್ ಗೊತ್ತಾಗಿತ್ತ್ ದೊಡ್ಡ ಹುಲಿ ಈಗ ಇಲ್ಲಿ ಇಲ್ಲೆಂತ. ಹಾಂಗೇ ಜಾಗ್ರತೆಲಿ ಮುಂದೆ, ಮುಂದೆ ಹೋದ ಅಪ್ಪಯ್ಯಣ್ಣನ ಕಣ್ಣ್‌ಗೆ ಈಗ ಮರಿಗ ಕಾಣ್ತಿದ್ದೊ. ಮೂರ್ ಮರಿಗ ಒಂದರ ಮೇಲೋಂದ್ ಬಿದ್ದ್‌ಕಂಡ್ ಮರ್ಡ್‌ತಿದ್ದೊ. ಸಣ್ಣ ಮರಿಗ, ಕಣ್ಣ್‌ಬುಟ್ಟು ತುಂಬಾ ದಿನ ಆಗಿರಿಕಿಲೆ. ಕೊತ್ತಿಗಳಷ್ಟೇ ದೊಡ್ಡವಿದ್ದೊ. ಅದರ್ನೇ ನೋಡಿಕಂಡಿದ್ದವುಕೆ ಅವರ ಮೇಲೆ ಯಾವುದೋ ವ್ಯಾಮೋಹ ಹುಟ್ಟಿತ್ತ್. ತುಂಬಾ ಹೊತ್ತ್ ಅದರ್ನೇ ನೋಡಿಕಂಡ್ ಯಾವುದೋ ಲೋಕಲಿ ಇದ್ದಾಂಗೆ ಇದ್ದೊ. ಅವು ಈಗ ನಿಜಕ್ಕೂ ಬಂದ ಕಾರ್ಯ, ಬೇಟೆ ಎಲ್ಲನೂ ಮರ್ತಾಂಗೆ ಇದ್ದೊ. ಒಂದರ ಮೇಲೊಂದ್ ಹತ್ತಿ, ಕಚ್ಚಿ, ಪರ್ಚಾಡಿಕಂಡ್ ಇದ್ದ ಮರಿಗಳ ಕಂಡ್ ಅಪ್ಪಯ್ಯಣ್ಣ ಆ ಸಮಯಲಿ ಎಲ್ಲನೂ ಮರ್ತಿದ್ದೊ. ಎಷ್ಟೊ ಹೊತ್ತ್ ಹೀಂಗೇ ಕಳ್ದ್ ಹೋಗಿತ್ತ್. ಸಮಯಕ್ಕೆ ಈಗ ಯಾವ ಬೆಲೆನೂ ಇತ್ತ್ಲೆ. ಆದರೂ ಎಲ್ಲವೂ ಯಾವುದೊ ಕ್ಷಣಕ್ಕಾಗಿ ಕಾಯಿತ್ತಿದ್ದೊ. ತುಂಬಾ ಹೊತ್ತ್ ಹೀಂಗೇ ಕಳ್ತ್. ತುಂಬಾ ಹೊತ್ತ್‌ಂದ ಕಾದದೋ.... ಕೆಲವು ದಿನಂದ ಹಗಲ್ ರಾತ್ರಿ ಬೊಚ್ಚಿಕಂಡ ಕಾಡ್‌ಲೀ ಕಳ್ದದೋ.... ಯಾವುದೋ ಗೊತ್ತಿಲೆ. ಅಪ್ಪಯ್ಯಣ್ಣನ ಮನ್ಸ್‌ಗೆ ಬಂದ ಸಂಗತಿ ಒಂದ್ ಅವರ ಬೇಟೆನ ನಿಯಮ ಮೀರಿ ಇತ್ತ್. ತುಂಬಾ, ತುಂಬಾ ಹೊತ್ತ್ ಆ ಮರಿಗಳ ನೋಡಿಕಂಡ್ ಇದ್ದವ್ಕೆ ಅವರ ಮೇಲೆ ಯಾವುದೋ ವ್ಯಾಮೋಹ ಬಂದಿತ್ತ್. ಅಯ್ಯೇ ಇನ್ನೂ ಬಾರದಿರಿಕನ ಅದರ ಕಾದ್‌ಕಂಡ್ ಇದ್ದ ಮರಿಗಳ ಚಡಪಡಿಕೆ ಅತಿಯಾಗಿತ್ತ್. ಆ ಒಂದ್ ಕ್ಷಣಲಿ ಅಪ್ಪಯ್ಯಣ್ಣನೂ ಎಲ್ಲಾ ವಿದ್ಯೆಗಳನೂ ಮರ್ತಾಂಗೆ ನಡ್ಕಂಡೊ. ಆ ಸಮಯಲಿ ಅವರ ಮನ್ಸ್‌ಗೆ ಬಂದದ್ ಹುಲಿ ಹೇಂಗೂ ಬಾತ್ಲೆ. ಈ ಮರಿಗಳ ತೆಕಂಡ್ ಹೋಗಿ ಸಾಂಕಿರೆ ಹೇಂಗೇಂತ. ಅದ್ ಮರಿಗ ಆಗಿರ್‍ವೊ, ಆದರೆ ಅದ್ ಹುಲಿ ಮರಿಗ. ಅದರ್ನನೂ ತಕಂಡ್ ಹೋಗಿ ಸಾಂಕಕೂಂತ ಮನ್ಸ್‌ಗೆ ಬಂದದ್ ಅಂತಾ ಗಂಡೆದೆಗೆ ಮಾತ್ರ ಸಾಧ್ಯ. ಯಾಕೋ ಪ್ರೀತಿ ಜಾಸ್ತಿ ಆತ್. ಯಾಗೋಳೂ ಹೀಂಗೆ ಆಗಿತ್ತ್ಲೆ. ಈ ಹಿಂದೆ ಇದ್ದ ಎಲ್ಲದರನೂ ಮೀರಿ, ಇಲ್ಲೆ ಹುಲಿ ಬಾಕಿಲೆ; ಇಲ್ಲಿವರೆಗೆ ಬಂದದ್ಕೆ ಈ ಮರಿಗಳಾರ್ ತೆಕಂಡ್ ಪೋಯಿಂತ ಕಂಡತ್. ಆ ಆಸೆ ಬೆಳ್ಕಂಡೇ ಹೋತ್. ಸುತ್ತ್ ಯಾವ ಶಬ್ದನೂ ಇಲ್ಲೆ. ಮೆಲ್ಲಂಗೆ ಕೆಳಗೆ ಇಳ್ದ್ ಮರಿಗಳ ಹಿಡ್ಕಂಡ್ ಮೇಲೆ ಹತ್ತಿ ಮತ್ತೆ ಹುಲಿನ ಕಾಯೊಮೋಂತ ಒಂದ್ ರೀತಿನ ವಿಚಿತ್ರ ಆಸೆ ಹುಟ್ಟಿಕಂಡತ್. ಹುಟ್ಟಿದರ್‌ಂದಳೂ ನೆನ್ಸಿದರನೇ ಮಾಡಿಕಂಡ್

ಬಂದ ಅವ್ಕೆ ಅದೇನೂ ದೊಡ್ಡದ್‌ಂತ ಕಂಡತ್ಲೆ. ಇನ್ನ್ ಸುಮ್ಮನೆ ಸಮಯ ಹಾಳ್ ಮಾಡ್ದು ಬೇಡ, ಆ ಮರಿಗಳ ಹಿಡ್ಕಂಡ್ ಮತ್ತೆ ಬೊಳ್ಳಿ ಹತ್ತಿ ಕುದ್ರುದೇ ಒಳ್ಳೆದೂಂತ ಕಂಡತ್. ಒಮ್ಮೆ ಮನ್ಸ್‌ಗೆ ಬಂದದರ ಮಾಡದೇ ಇರೊವು ಅವಲ್ಲ. ಕೂಡ್ಲೆ ಅವು ಇದ್ದಲ್ಲಿಂದ ಮೆಲ್ಲ ಮುಂದೆ ದಾಟಿಕೆ ಸುರುಮಾಡ್ದೊ. ಪಲ್ಲೆ ಬೊಳ್ಳೀಂತ ಹೇಳ್ರೆ ಅದರ ಬುಡ ಯಾವ್ದೂಂತ ಗೊತ್ತಾಕಿಲೆ ಅಷ್ಟ್ ಹಬ್ಬಿದ್ದದೆ. ಆಲದ ಮರದಾಂಗೆ, ಅವ್ ಕುದ್ದ ಬೊಳ್ಳಿನೂ ಅಂತದೆ. ಅದರ ಅಂಗ ಅಂಗಗಳೂ ಸುತ್ತ್ ಪರ್ಲಾಂಗ್ ದೂರಕ್ಕೂ ಹಬ್ಬಿತ್ತ್. ಸಣ್ಣದಾಗಿದ್ದರೂ ಒಂದ್ ಬೊಳ್ಳಿ ಹುಲಿ ಮರಿಗ ಇದ್ದ ಜಾಗೆಲಿ ನೆಲ ಮುಟ್ಟಿ ಮತ್ತೆ ಮೇಲೆ ಹಬ್ಬಿತ್ತ್. ಅದರ್ಲಿ ಇಳಿದು ಸೊಲ್ಪ ಕಷ್ಟನೇ ಇತ್ತ್. ಮೆಲ್ಲಂಗೆ ಅತ್ತ ಅವು ಇಳ್ಯಕೆ ಸುರುಮಾಡ್ದೋ. ಅದ್ ಅವರ ತಪ್ಪು ನಿರ್ಧಾರ ಆಗಿತ್ತ್. ಆದರೆ ಅದ್ ಅವರ ಜೀವನದ ಹೆಮ್ಮೆನ ಸಮಯದ ಮುಂದೆನ ಕ್ಷಣ ಆಗಿತ್ತ್. ಎಷ್ಟೇ ಆದರೂ ಅವು ಬೇಟೆ ಜೀವಿ. ಮರಿಗಳ ತೆಕಂಡ್ ಮೇಲೆ ಬಾವೇಂತ ತಿಳ್ಕಂಡ್ ಇದ್ದರೆನೂ; ಅವರೊಳೆಗೆನ ಬೇಟೆಗಾರಂಗೆ ಅದ್ ಸರೀಂತ ಇತ್ಲೆ ಕಂಡದೆ. ಅದ್ ಜಾಗ್ರತೆಲಿ ಇತ್ತ್. ಸಣ್ಣ ಜಾಗ್ರತೆ ಅದಲ್ಲ. ಎಲ್ಲದರ್ರೂ ಮೀರಿ ನಿಲ್ಲುವ ಆ ಜಾಗ್ರತಾವಸ್ಥೆ ಇಂದ್ರಿಯ ಅದ್ ಜಾಗ್ರತೆ ಸ್ಥಿತಿಲಿತ್ತ್. ಅಪ್ಪಯ್ಯಣ್ಣ ಈಗ ನೆಲದೆಡೆ ತುಂಬಾ ಕೆಳಗೆ ಬಂದಿದ್ದೊ. ಒಮ್ಮೆ ಕೆಳಗಿಳ್ದರೆ ಆ ಮೂರು ಮರಿಗ ಕೈಗೆ ಸಿಕ್ಕುವಾಂಗೆ ಇದ್ದೊ. ಅವರ್ನೇ ನೋಡಿಕಂಡ್ ಇದ್ದ ಮರಿಗ ಅಸಹಾಯಕ ಸ್ಥಿತಿಲಿ ಒಂದರ ಮೇಲೊಂದ್ ಮಲ್ಗಿಕಂಡ್ ಒಟ್ಟಾರೆ ಒಂದ್ ಮುದ್ದೆನಾಂಗೆ ಇದ್ದೊ. ಇಷ್ಟೆಲ್ಲಾ ಇದ್ದರೂ ಅವರ ಬೇಟೆನ ಮನಸ್ಥಿತಿಲಿ ಬಲಗೈಲಿದ್ದ ಬೆಡಿನ ಎಂತದೇ ರೀತಿಲಿ, ಎಂತದೇ ಸಮಯಲಿ ಉಪಯೋಗಿಸುವಂತ ಅತ್ಯಂತ ಸಮಸ್ಥಿತಿಲಿ ಹಿಡ್ಕಂಡಿದ್ದೊ. ಕಡೇ ಕ್ಷಣ ಅದ್, ಯಾವ ಸಾಮಾನ್ಯ ಬೇಟೆಗಾರನೂ ಹಾಂಗೆ ಯೋಚನೆ ಮಾಡಿಕಿಲೆ. ಆದರೆ ಅದ್ ಅಪ್ಪಯ್ಯ ಗೌಡ, ಬಡ್ಡಡ್ಕ ಅಪ್ಪಯ್ಯ, ಕುಡಕಲ್ಲ್ ಅಪ್ಪಯ್ಯ. ನೆಲಕ್ಕೆ ಇಳಿವ ಕಡೇ ಸಮಯದ ಮುಂದೆ ಜೋಡ್ ಕೊಳವೆನ ಆ ಬೆಡಿನ ಎರ್ಡೂ ಕುದ್ರೆಗಳ ಎಳ್ದೊ. ಆಲ್ವಾಮೆಕ್ಸ್ ತೋಟೆಗ ಎರ್ಡ್ ಅದರ್ನೇ ಕಾದ್‌ಕಂಡ್ ಇದ್ದನೋ ಏನೋ.....ಅಲ್ಲ ಅಪ್ಪಯ್ಯ ಎಳ್ದದೋ.... ತೊಂಡಜ್ಜ ಎಳ್ದದ್ದೋ.... ಬೊಡ್ಡಜ್ಜ ಎಳ್ದದ್ದೋ ಒಂದ್ ದೊಡ್ಡ ಇತಿಹಾಸದ ಮುಂದೆನ ಕಡೇಕ್ಷಣ ಅದಾಗಿತ್ತ್. ಕಣ್ಣ್ ಪೂರಾ ಮರಿಗಳ ಮೇಲಿತ್ತ್. ಆಗ ಆ ಕ್ಷಣ ಅಪ್ಪಯ್ಯನಂತ ಅಪ್ಪಯ್ಯನೇ ನಡ್ಗಿ ಹೋತ್ ಆ ಭೀಕರ ಘರ್ಜನೆಂದ, ಇಡೀ ಕಾಡ್, ಗೊಡಲ್ ಗೊಡಲ್‌ನೂ ಆ ಕ್ಷಣಕ್ಕೆ ದರ್ಪಿದಾಂಗೆ ಆಗಿತ್ತ್. ಅಪ್ಪಯ್ಯಣ್ಣನ ಕೆಳಗೆ ಜೀವನನೇ ಪಣಹಿಸಿದ ಹುಲಿ ಘರ್ಜಿಸಿತ್ತ್. ಎಲ್ಲಾ ಕಲ್ಪನೆಗ, ಯೋಚನೆ ನಿತ್ತಾಂಗೆ ಆದ ಆಕ್ಷಣ ಕಣ್ಣೆದುರು ಕಂಡದ್ ಆ ಹೆಬ್ಬುಲಿ. ಅದ್ಕೂ ಅಪ್ಪಯ್ಯಣ್ಣಂಗೂ

ಇದ್ದ ದೂರ ಬರೇ ಒಂದೆರ್ಡ್ ಮಾರ್. ಎಡ್ಡಕೈಲಿ ಪಲ್ಲೆ ಬೊಳ್ಳಿ.... ಬಲ್ದ ಕೈಲಿ ಮಿಡ್‌ಲ್ಯಾಂಡ್ ಬೆಡಿ, ಕೆಳಗೆ ಹುಲಿ; ಹುಲಿನ ಅಬ್ಬರಕ್ಕೆ ಅಪ್ಪಯ್ಯಣ್ಣ ಅಣು ಅಣು ನಡ್ಗಿ ಹೋಗಿದ್ದೊ. ಆ ಕ್ಷಣಲಿ ಏನ್ ನಡ್ದೋ ಗೊತ್ತಿಲೆ. ಯಾವ ಅನುಭವ ಅವರ್ಲಿ ಇತ್ತೊ. ಯಾವ ದೆವ್ವ ದೇವ್ರುಗಳ ಸಹಾಯ ಇತ್ತೋ.. ಮೈನ ಕುಗ್ಗಿಸಿ ಹುಲಿ ಹಾರುವ ಸಮಯ. ಅದರ ಇಡೀ ಬಾಯಿನ ಬುಟ್ಟ್ ಹಿಂದೆನ ಕಾಲ್‌ನ ಗಟ್ಟಿ ಊರಿ ಹುಲಿ ಹಾರ್ದು ಮಾತ್ರ ಬಾಕಿ ಇತ್ತ್. ಹೇಂಗೆ ಹೊಡ್ದೊನೋ, ಆ ಕುಡಕಲ್ಲ್ ಶಕ್ತಿಗಳಿಗೇ ಗೊತ್ತ್. ತೆಗ್ದ ಬಾಯಿನ ನಡುಗೆ ಕೊಳವೆ ತೋರ್ಸಿದ ಅಪ್ಪಯ್ಯಣ್ಣ ಒಂದೇ ಕೈಲಿ ಎರ್ಡೂ ಕಳ್ಳಗಳ ಒಮ್ಮೆನೇ ಮೀಟಿದೋ... ಇಡೀ ಕಾಡ್‌ಗೆ ಕಾಡೇ ನಡ್ಗಿ ಹೋಗಿತ್ತ್. ಒಮ್ಮನೇ ಬೆರ್ಳ್ ಎರ್ಡ್ ಮೀಟಿರೆನೂ ಗುಂಡ್ ಎರ್ಡಾಗಿ ಇಡೀಕಾಡ್‌ನನೇ ನಡ್ಗಿಸಿತ್. ಅದರೊಟ್ಟಿಗೇ ಎಂತಾ ಎದೆನೂ ನಡ್ಗ್‌ವಂಗೆ ಹುಲಿನ ಗರ್ಜನೆ ಇಡೀ ಕಳ್ಗಿ, ಪಡ್ಪು, ಚೆಳ್ಳಂಗಾರ್, ಕುದ್ಕುಳಿ, ಕಾಡ್‌ನ ಹೊಂಡ ಗುಂಡಿಗಳ ಕಂತಿ ಹೋಗಿತ್ತ್. ಕುತ್ತ ಹಾರ್ದ್ ಹುಲಿ ಕೈ ಬೀಸಿ ಹೊಡ್ದಿತ್ತ್. ಆದರೆ ಅದ್ ಹೊಡ್ದ ಪೆಟ್ಟ್‌ನ ಗುರಿ ತಪ್ಪಿತ್ತ್. ಒಂದ್ ಕೈಲಿ ಹಿಡ್ದ್ ನೇತಾಡಿಕಂಡ್ ಇದ್ದ ಅಪ್ಪಯ್ಯಣ್ಣ ಹಾಂಗೇನೇ ಮೊಗ್ಚಿ ಬೊಳ್ಳಿನ ಮೇಲೆ ಕವಂಚಿ ಮಲ್ಗಿದೊ. ಈಗ ಇಡೀ ಕಾಡ್ ಪ್ರಶಾಂತ ಆಗಿತ್ತ್. ಯುದ್ದ ಮುಗ್ದ ನಾಡ್‌ನಾಂಗೆ. ಎಷ್ಟೋ ಹೊತ್ತ್ ಹಿಡ್ದ್ ಬೊಳ್ಳಿಗೆ ಕವ್‌ಂಚಿ ಹಾಂಗೇ ಮಲ್ಗಿದ್ದೋ ಅಪ್ಪಯ್ಯಣ್ಣ. ಏನಾತ್ ಎಂತದಾತ್ ಒಂದೂ ಅವ್ಕೆ ಆ ಸಮಯಲಿ ಗೊತ್ತಾತ್ಲೆ. ಎಷ್ಟ್ ಹೊತ್ತಾತೋ ಅಲ್ಲ ಒಂದು ಕ್ಷಣನೇ ಅವ್ಕೆ ಹಾಂಗೆ ಕಂಡತೋ ಗೊತ್ಲೆ. ಕಣ್ಣ್ ಬುಟ್ಟ್ ನೋಡ್ದ ಅಪ್ಪಯ್ಯಣ್ಣ ಒಂದ್ ಕ್ಷಣ ತಬ್ಬಿಬ್ಬಾಗಿದ್ದೊ. ಯಾವುದರ ಪರಿವೆನೂ ಇಲ್ಲದ ಹುಲಿ ಮರಿಗ ಸತ್ತ್ ಬಿದ್ದ ಅಮ್ಮನ ಮೊಲೆಂದ ಹಾಲ್ ಕುಡ್ಯತಿದ್ದೊ. ಇಡೀ ಜೀವನನೇ ಒಮ್ಮೆ ಮುಳ್ಗಿದಾಂಗೆ ಅವ್ಕೆ ಆತ್. ಆದರೆ ಸತ್ಯ ಬೇರೇನೆ ಇತ್ತ್. ಅವೀಗ, ಸಾಮಾನ್ಯ ಆಗಿತ್ಲೆ. ಇಡೀ ನಾಡ್ ಕಾಣದೇ ಕಂಡ ಒಬ್ಬ ಅಸಾಮಾನ್ಯ ದಂತ ಕತೆನೇ ಆಗಿ ಹೋಗಿದ್ದೊ. ಹುಲಿ ಅಪ್ಪಯ್ಯ ಆಗಿದ್ದೊ. ಕನ್ನಡ ನಾಡ್‌ನ ಒಬ್ಬ ಅಸಾಮಾನ್ಯ ಬೇಟೆಗಾರ ಆಗಿಹೋಗಿದ್ದೊ. ಇಡೀ ಕಾಡ್‌ಗೆ ಕಾಡೇ ಸ್ವಲ್ಪ ಹೊತ್ತ್ ನಿಶ್ಯಬ್ದ ಆಗಿ ಹೋಗಿತ್ತ್. ಎಲ್ಲ ಶಬ್ದಗ ಉಡುಗಿ ಹೋಗಿದ್ದೊ. ಪಿಜಿನ ಎಲ್ಲನೂ ಮರದ ಮೇಲೆಂದ ನೋಡ್ತಿತ್ತ್. ನೋಡಿಕಂಡ್ ಇತ್ತ್. ಅಂವ ಹೇಳ್ದರ ಕೇಳಿತ್ತ್. ಎಲ್ಲವೂ ಹೇಳ್ತಿದ್ದೊ ಅಷ್ಟೇ. ಆದರೆ ಅಂವ ಈಗ ಕಣ್ಣ್‌ಲಿ ಕಂಡಿತ್ತ್. ಎಷ್ಟೆಷ್ಟೋ ಜನ ಅಪ್ಪಯ್ಯಣ್ಣನೊಟ್ಟಿಗೆ ಬೇಟೆಗೆ ಹೋಗಿದ್ದೊ. ಆದರೆ ಇಂತದೊಂದು ಅವಕಾಶ ಅವಂಗೆ ಮಾತ್ರ ಸಿಕ್ಕಿತ್ತ್. ಒಂದ್ ಇರ್ಲ್ ಇಡೀ ಕಾಡ್‌ಲೇ ಕಳ್ದ ಅವಂಗೆ, ಬೊದ್ಕಿಕೇ ಸಾಧ್ಯ ಇಲ್ಲೆನೋಂತ ಇದ್ದ ಅಂವ ಒಂದ್ ಮಹಾಬೇಟೆಗೆ

ಸಾಕ್ಷಿಯಾಗಿತ್ತ್. ಅಪ್ಪಯ್ಯಣ್ಣ ಬೊಳ್ಳಿಂದ ಕೆಳಗಿಳಿಯಕೆ ಮುಂದೆನೇ ಹೊಡ್ಡ ಕಾಲಿ ತೋಟೆಗಳ ತೆಗ್ಡ್ ಬೇರೆ ತುಂಬ್ಸಿದೋ. ಒಟ್ಟಿಗೇ ಪಿಜಿನ ಇದ್ದ ಕಡೆ ತಿರ್ಗಿ "ಏ ಹೈದಾ, ಇಳ್ಡ್ ಬಾ" ಕರ್‍ದೊ. ಅಷೊತ್ತಿಗೆ ಅಂವ ಮರಂದ ಇಳ್ದಾಗಿತ್ತ್. ತೇಟ್ ಕುರೆ. ಇಳಿದು ಹತ್ತುದು ಅವಂಗೆ ದೊಡ್ಡ ಸಂಗತಿನೇ ಅಲ್ಲ. ಅಂವ ನೆಲ ಮುಟ್ಟಿಕನ ಅಣ್ಣ ಕರ್ದದ್ ಕೇಳ್ತ್. ಇಂತಾ ದೊಡ್ಡ ಸಾಹಸಲಿ ನಾನೂ ಒಳೆಲೇಂತ ಹೆಮ್ಮೆಲಿ ಹುಲಿ ಬಿದ್ದ ಕಡೆ ಓಡಿಕಂಡೇ ಬಾತ್. ಅಪ್ಪಯ್ಯಣ್ಣ ಈಗ ಬಿದ್ದ ಹುಲಿನ ಕರೆಲಿ ನಿತ್ತಿದ್ದೊ. ಒಂದ್ ಕೂಕ್ಳ್ ಹಾಕ್ ಹೈದ ಅವು ಬರ್‍ಲಿ, ಪಿಜಿನಂಗೆ ಹೇಳ್ದೊ. ಪಿಜಿನ ಎರ್‍ಡ್ ಕೈಗಳ ಬೆರ್‍ಳ್‌ಗಳ ಬಾಯಿಗೆ ಹಾಕಿ ಜೋರ್ ಶಿಳ್ಳೆ ಹಾಕಿತ್. ಅಪ್ಪಯ್ಯಣ್ಣ ಬೆಡಿನ ಕೊಡಿನೊಮ್ಮೆ ಹುಲಿನ ಮೈಗೆ ಮುಟ್ಸಿದೋ... ಮನ್ಸ್‌ಗೆ ಏನ್ ಕಂಡತೋ ಏನೋ... ಕೈಮುಗ್ದ್ ದೆವ್ವ ದೇವ್ರುಗಳ ನೆನ್ದೊ. ಬೆಡಿನ ಆಕಾಶದ ಕಡೆಗೆ ಹಿಡ್ದ್ ಒಂದರ ಮೇಲೊಂದ್ ಗುಂಡ್ ಹೊಡ್ದೊ. ಯಾಗೊಳೂ ಹಾಂಗೆ ಮಾಡ್ದವು ಅವು ಅಲ್ಲ. ಯಾಕೆನೋ ಗೊತ್ಲೆ. ಸತ್ತ್ ಬಿದ್ದ ಹುಲಿಗೆ ಅವು ಕೊಟ್ಟ ಗೌರವನೋ.... ಅಲ್ಲ ಸಾಧಿಸಿಕೊಟ್ಟ ಶಕ್ತಿಗಳಿಗೆ ನಮಿಸಿದ ಕ್ರಮನೋ...ಏನೋ... ಅದ್ ಅವ್ಕೂ ಗೊತ್ತಿಲ್ಲೆ. ಆದರೆ ಅವ್ಕೂ ಆ ಕ್ಷಣಲಿ ತಿಳ್ಯದೇ ಇದ್ದ ಒಂದ್ ವಿಶೇಷತೆ ಇತ್ತ್. ಅಂದ್‌ನ ದಿನ ಸಂಕ್ರಮಣ. ಅದೇ ಸಮಯಲಿ ಕುಡಕಲ್ಲ್ ಸ್ಥಾನಲಿ ಸಂಕ್ರಮಣ ನಡ್ಕಂಡಿತ್ತ್. ಶಂಖ ಜಾಗಟೆ ಮೊಳ್ಗಿಕಂಡಿತ್ತ್. ಆರತಿ ಎತ್ತಿ ಕಂಚ್ ಕಲ್ಲಿಗೆ ಕಾಯಿ ಒಡ್ದ್ ಬಂದ್ ಕುಡಕಲ್ಲ್ ಪೂಜಾರಿಗೆ ಕಂಡೂ ಕಾಣದಿರುವಂತ ಸಣ್ಣ ಮೈಮನಿಕೆ ಇತ್ತ್. ಬಡ್ಡಡ್ಕಲಿ ಬೊಡ್ಡಜ್ಜ ಕಲ್ಲ್‌ನ ಕೆಳಗೆ ಕೆಂಪ ಒಂದ್ ಬ್ರೇಂಕ್, ಬ್ರೇಂಕ್‌ಂತ ಮರ್‍ಗ್ಟಕಂಡಿತ್ತ್. ಅಷ್ಟೊತ್ತಿಗೆ ಕೂಕ್ಳ್ ಕೇಳ್ದವು ಅಂದರೆ ಬಿಲ್ಲ್‌ಗೆ ನಿತ್ತಿದ್ದವು ಅಲ್ಲಿಗೆ ಬಂದ್ ಸೇರ್‍ದೊ. ಅವರೊಟ್ಟಿಗೆ ಕಾಡ್ ಹುಗ್ಗದೇ ಇದ್ದವು, ಮತ್ತೆ ಕೆಲವು ಜನ ಒಟ್ಟ್ ಒಂದ್ ಹದ್ನೈದ್ ಜನ ಅಲ್ಲಿಗೆ ಬಂದ್ ಸೇರ್‍ದೊ. ಎಲ್ಲವ್ಕೂ ಪಿಜಿನ ಅವನೇ ಹುಲಿ ಹೊಡ್ದವರಾಂಗೆ ಕತೆ ಹೇಳ್ತಿತ್ತ್. ಅವ ಹೊಡ್ಯದಿದ್ದರೂ ಇಲ್ಲಿ ಅವನ ಪಾತ್ರ ದೊಡ್ಡದೇ ಇತ್ತ್. ಗುಂಡ್‌ನ ಶಬ್ದ ಕೇಳ್ದ, ಬೇಟೆನ ಬಗ್ಗೆ ಗೊತ್ತಿದ್ದ ನಾಯಿ ಒಂದ್ ಬೊಗಳ್ತಾ ಓಡಿಕಂಡ್ ಬಾತ್. ಹಂದಿ ಬಿದ್ದಿರ್ದುಂತ ತಿಳ್ಕಂಡಿದ್ದಿರೊಕು. ಸೀದಾ ಬಂದದೇ ಬಿದ್ದ ಪ್ರಾಣಿನ ಹಕ್ಕಲೆ ಹೋತ್. ಅದರ ನೋಡಿ ನಾಯಿನ ಬೊಗ್ಳಟ ನಿಂತೇ ಹೋತ್. ಎಷ್ಟ್ ಜೋರ್‌ಲಿ ಓಡಿ ಬಂದಿತ್ತೋ ಅದರ್ದ ಜೋರ್‌ಲಿ ಬೀಲ ಕಚ್ಚೆ ಹಾಕಿ ವಾಪಸ್ಸ್ ಓಡ್ತ್. ಯಾರೋ ದಂಡ್ ಕಡ್ದ್ ತಂದೊ. ಕಾಡ್ ಬೊಳ್ಳಿಲಿ ಹುಲಿನ ಕಾಲ್, ಕೈಗಳ ಕಟ್ಟಿ ದಂಡ್‌ನ ಅದರೊಳಗೆ ಸೇರ್‍ಸಿ ಆರ್ ಜನ ಸೇರಿ ದಂಡ್‌ನ ಹೆಗಲಿಗೇರ್‍ಸಿ ಶೇಷಪ್ಪಣ್ಣನ ಮನೆಕಡೆ ಹೊತ್ತ್‌ಕಂಡ್ ಹೊರ್‍ಟೊ. ಪಿಜಿನನೂ ಅಣ್ಣಿಹೈದನೂ ಮರಿಗಳ ನೇಚಿಕಂಡ್ ಒಟ್ಟಿಗೇ ನಡ್ದೊ.

ಮನೆಮುಟ್ಟಿಕಾಕನ ಶೇಷಪ್ಪಣ್ಣನ ಯಜಮಾನ್ತಿ ಕುರ್ದಿನೀರ್ ತೆಕಂಡ್ ದೃಷ್ಟಿ ತೆಗ್ಯಕೆ ಕಾದ್‌ಕಂಡೇ ಇದ್ದೊ. ದೃಷ್ಟಿನೂ ತೆಗ್ದೊ. ಅಷ್ಟೊತ್ತಿಗೆ ಸುಮಾರ್ ಕಡೆ ಈ ಸುದ್ದಿ ಹಬ್ಬಿಹೋಗಿತ್ತ್. ಇತ್ತ ಕುಡಕಲ್ಲ್‌ಲಿ ಸಂಕ್ರಮಣ ಮುಗ್ದ್ ಕಲ್ಲುರ್ಟಿಗೆ ಅಗಲ್ ಇಕ್ಕಿಕಂಡಿದ್ದೊ. ಸುದ್ದಿ ಅಲ್ಲಿಗೂ ತಲ್ಪಿತ್. ರಾಮಯ್ಯಣ್ಣ ಮನೆಲಿಲ್ಲದ ಕಾರಣ ಬಾಬಣ್ಣ ಮತ್ತೆ ಕೆಲವು ಕುಡಕಲ್ಲ್ ಹೈದಂಗಳೂ ಸೀದಾ ಕಳ್ಗಿನತ್ತ ಓಡ್ತಾಂಗೆ ನಡ್ದೊ. ಎಲ್ಲವೂ ಸೇರಿ ಚರ್ಮನ ಬುಡ್ಸಿದೊ. ಈಗ ಹುಲಿ ಚರ್ಮ, ಹುಲಿಮರಿಗಳ ತೆಕಂಡ್ ಬಂದ್ ಸಣ್ಣ ದಂಡೇ ಬಡ್ಡಡ್ಕಕೆ ಹೊರ್ಟತ್. ಅಪ್ಪಯಣ್ಣ, ಬಾಬಣ್ಣಂಗೆ ಹೇಳ್ದೊ. "ನೀನೂ, ಶೇಷಪಣ್ಣನೂ ಎಲ್ಲವೂ ಸೀದಾ ಹೋಗಿ, ನಾ ಒಮ್ಮೆ ಸ್ಥಾನದಕ್ಕಲೆ ಹೋಗಿ ಕೈಮುಗ್ದ್ ಬನ್ನೇಂತ ಕುಡಕಲ್ಲ್‌ನತ್ತ ನಡ್ದೊ. ಅವ್ಕೆ ಮನ್ಸ್‌ಗೆ ಬಂದ್ ಹೋಗಿತ್ತ್. ಇಂದ್ ನಾ ಹೊಡ್ದದ್ ಅಲ್ಲ ಅದರ ಹೊಡ್ಸಿದ್ ಕುಡಕಲ್ಲ್ ದೆವ್ವಾಗಾಂತ. ಸೀದಾ ಅವು ದೊಡ್ಡ ಮನೆಗೇ ಬಂದೊ. ಅಲ್ಲಿ ಸಂಕ್ರಮಣ ಮುಗ್ದ್ ಕಲ್ಲುರ್ಟಿಗೆ ಅಗಲ್ ಇಕ್ಕಿನೂ ಆಗಿತ್ತ್. ಅಂದರೂ ಸ್ಥಾನದ ಬಾಗಿಲ್ ಮುಚ್ಚದೇ ಎಲ್ಲವೂ ಅವರ್‌ನೇ ಕಾದ್‌ಕಂಡಿದ್ದೊ. ಕೋಡ್ತಿಲಕ್ಕೆ ಹೋಗಿದ್ದ ರಾಮಯಣ್ಣಂಗೆ ಸುಳ್ಯಲಿನೇ ಸುದ್ದಿ ಸಿಕ್ಕಿತ್. ಅವ್ರೂ ದೊಡ್ಡಮನೆಗೆ ಬಂದ್ ಸೇರ್ದೊ. ಕುಟುಂಬದೆಲ್ಲವೂ ಸ್ಥಾನದ ಮುಂದೆ ನಿತ್ತ್ ಪ್ರಾರ್ಥನೆ ಮಾಡಿಕಂಡೋ. ಅಪ್ಪಯ್ಯಣ್ಣ ಅಲ್ಲಿಂದ ಕೆಳಗೆ ಪರ್ಲಾಂಗ ದೂರಲಿದ್ದ ಬೈನಾಟಿ ಸ್ಥಾನಕ್ಕೆ ಹೋಗಿ ಕೈಮುಗ್ದೊ. ಅಲ್ಲಿಂದ ಬಡ್ಡಡ್ಕಕ್ಕೆ ಮುಟ್ಟಿಕಾಕನ ಹಿಂಬತ್ತಾಗಿತ್ತ್. ಶೇಷಪ್ಪಣ್ಣನೂ ಬಾಬಣ್ಣನೂ ಚರ್ಮ ಬಲ್ಪಿಕೆ ಎಲ್ಲಾ ತಯಾರ್ ಮಾಡಿ ಹಿಸಿ ಅಪ್ಪಯ್ಯಣ್ಣನನೇ ಕಾದ್‌ಕಂಡಿದ್ದೊ. ರಾಮಯಣ್ಣಂಗೂ ಅಪ್ಪಯಣ್ಣಂಗೂ ಸ್ವಲ್ಪ ಮನಸ್ತಾಪ ಇದ್ದರೂ ತಮ್ಮನ ಬಗ್ಗೆ ಹೆಮ್ಮೆನೂ ಇತ್ತ್. ಅವು ಸೀದಾ ತಮ್ಮನ ಮನೆ ಎದ್ರ್‌ಹೋಗಿ ಹುಲಿ ಚರ್ಮನ, ಹುಲಿಮರಿಗಳ ನೋಡಿಕಂಡ್ ಬಂದೋ. ಅವ್ಕೆ ಕಂಡತ್ ಹುಲಿಮರಿಗ ಬೊದ್ಕುದು ಕಷ್ಟಾಂತ. ಇಷ್ಟೆಲ್ಲಾ ಆಕಂಡಿರಿಕನ ಬಾಬಣ್ಣನ ತಲೆಲಿ ಬೇರೇನೆ ಯೋಚನೆ ಇತ್ತ್. ಬೋಜಪ್ಪನ ಹಕ್ಕಲೆ ಕೇಳಿ ಒಂದ್ ಮರಿನಾರ್ ನಾನೇ ಸಾಂಕೊಕೂಂತ ನೆನ್ಸಿಕಂಡೇ ಕುಶಿಪಡ್ತಿತ್ತ್. ಮನೆ ಹೆಂಗಸರ್ಗೆ ಇದ್ ಹೊಸ್ತಲ್ಲ. ಮಾಮೂಲ್. ಪಾಪ ಅವರ ಕಷ್ಟ ಅವ್ಕೇ ಗೊತ್ತ್. ಹೊಗೆಲಿ ಕಣ್ಣ್ ಒರ್ಸಿಕಂಡ್ ಬಂದವ್ಕೆ ತಿಂಬಕೆ ಬೇಸಿಕಂಡ್ ಇದ್ದೊ.

***



ಮಲ್ಗಿದ ಬಾಬಣ್ಣಣ್ಣ ಎಷ್ಟೋ ಹೊತ್ತು ಹೀಂಗೇ ಎಲ್ಲಾ ನೆನ್ನಿಕಂಡೇ ನಿದ್ದೆ ಹೋಗಿದ್ದೊ. ಪೂರಾ ಬೊಳ್ಪು ಆದರೂ ಎಚ್ಚರಿಕೆ ಆತ್ಲೆ. ನಾರಾಯಣ ಕತ್ತಲೆಗೆ ಬಂದ್ ಅಲ್ಲಿಂದ ಹೊರ್ಡಿಕಾಕನನೇ ತುಂಬಾ ಹೊತ್ತಾಗಿತ್. ಸುಮಾರ್ ಹೊತ್ತ್ ನಿದ್ದೆನೇ ಬಂದಿತ್ಲೆ. ಹಾಂಗಾಗಿ ಎಚ್ಚರಿಕೆ ಆತ್ಲೆ. ನಾಯಿಗ ಜೋರ್ ಬೊಗ್ಳಿಕೆ ಸುರುಮಾಡಿಕಾಕನನೇ ನಿದ್ದೆಂದ ಎದ್ದ್‌ದ್. ಯಾರಪ್ಪಾ ಈಗ ಬಂದವುಂತ ನೆನ್ನಿಕಂಡ್ ಕಣ್ಣುಜ್ಜಿಕಂಡೇ ಹೊರಗೆ ಬಂದೊ. ನೋಡ್ರೆ ನಾರಾಯಣ, ಗೋಪಾಲ, ವೆಂಕಪ್ಪ ಅಂಗಳಲಿ ಬಂದ್‌ಕಂಡ್ ಇದ್ದೊ. ನಾರಾಯಣನೂ ವೆಂಕಪ್ಪನೂ ಬಂದ್ ತಿಂಟೆಲಿ ಕುದ್ದೊ. ಗೋಪಾಲ ಮಾತ್ರ ಹೊರೆ ಹೊತ್ತ್ ನಿತ್ತ್‌ಕಂಡೇ ಇತ್ತ್. ನಾಯಿಗ ಅವನ ಕಾಲ್ ಬುಡಲೇ ಚಳ್ಳಚಳ್ಳಂತ ಹೇಳಿಕಂಡ್ ಇದ್ದೊ. ಮದ್ಯರಾತ್ರಿಲಿ ಹೋದವು ಇಷ್ಟ್ ಬೇಗ ವಾಪಸ್ಸ್ ಬಂದೊಳೊ.... ಗೋಪಾಲನ ತಲೆಲಿದ್ದ ಹೊರೆ ಹುಲಿ ಚರ್ಮನೋಂತ ನೆನ್ನಿಕಂಡ್ "ಎಂತದ್ ಹೊರೆಯ ಅದ್ ಕೆಳಗೆ ಇಳ್ಸಿಕೆ ಬೊತ್ತೊ" ಬಾಬಣ್ಣಣ್ಣ ಕೇಳಿಕನ ನಾರಾಯಣನೇ ಹೇಳ್ತ್. ಅಣ್ಣ ಅದ್

ಮುಳ್ಳ್‌ಹಂದಿಗ, ಎರ್ಡ್ ಮಾಳಲಿನೂ ಅಡ್ಡಿಲ್ ಹಾಕಿದ್ದೆ ಎರ್ಡ್ ಸಿಕ್ಕಿದೊ...... ಅದರ ಬುಡ್ಸಿಕೆನೂ ಸಮಯ ಇತ್ಲೆ. ಹಾಂಗೇ ಇತ್ತ ಹೊತ್ತ್‌ಕಂಡೇ ಬಂದೋ...." ಬಾಬಣ್ಣಣ್ಣಂಗೆ ಒಮ್ಮೆ ಕೋಪ ಬಾತ್. ಹೋದ ವಿಷಯ ಒಂದ್ ಈಗ ಬಂದ್ ಹೊಸ ವಿಷಯ ಹೇಳ್ತಾ ಉಟ್ಟು. "ಹೌದು ಮಾರಾಯ ನೀವು ಹೋದ್ದ್ ಏನಾತ್" ನಾರಾಯಣಂಗೆ ತಪ್ಪು ಗೊತ್ತಾತ್. "ಹೌದು ಅಣ್ಣ – ನಾವು ಹೋಕಾಕನೇ ಅಪ್ಪನೂ ತಮ್ಮನೂ ಸೇರಿ ಚರ್ಮ ಬುಡ್ಸಿದ್ದೊ. ಮತ್ತೆ ಅದರ ಬೊಲ್ಪಿ, ಉಳ್ದ ಕೆಲ್ಸ ಎಲ್ಲಾ ಮಾಡಿ ಇತ್ತ ಬಾಕನ ಮುಳ್ಳಂದಿ ಮಾಳನ ನೋಡ್ದೊ. ಎರಡರ್ಲಿನೂ ಸಿಕ್ಕಿತ್ತ್. ಮತ್ತೆ ಅದರ ಅಲ್ಲಿ ಕುದ್ದ್ ಮಾಸ ಮಾಡಿಕೆ ಆದುಲೇಂತ ಇತ್ತಳೇ ಹೊತ್ತ್ ತಂದೊ" ಸ್ವಲ್ಪ ತಡ್ದ್ ಮತ್ತೆ ಹೇಳ್ತ್. "ನಾ ಅಲ್ಲಿಗೆ ಬಾಕನ ಹೊತ್ತಾದೂಂತ ಅವೇ ಕಾಡ್‌ಲಿ ಕುದ್ದ್ ಚರ್ಮ ಬುಡ್ಸಿದೊ.... ನಾವು ಹೋದಮೇಲೆ ಹೊಟ್ಟೆ ಸಿಗ್ಟ್ ನೈಯಿಬಲೆ ತೆಗ್ಟ್ ತುಪ್ಪ ತೆಗ್ಯಕೆ ಅಲ್ಲಿನೇ ಕೊಟ್ಟ್. ಉಳ್ದದರ ಎಲ್ಲ ಗುಂಡಿಗೆ ಹಾಕಿ ಮುಗ್ಸಿಕನ ಬೊಳ್ಪಾತ್. ಅಲ್ಲಿಂದ ಸೀದಾ ಮಾಳ ನೋಡಿಕಂಡ್ ಇತ್ತ ಬಂದೊ. "ಹೇಂಗೆಯಾ ಚರ್ಮ ಸರೀ ಬುಡ್ಸಿಯೊಳೊನೋ ಇಲ್ಲೆನೋ"? "ಇಲ್ಲೆ ಅಣ್ಣ ಸರೀ ಬುಡ್ಸಿಯೊಳೊ– ಬೊಲ್ಪಿ ಯಾರಿಗೂ ಕಾಣದಲ್ಲಿ ಒಣ್ಗ್‌ಸಿಕೆ ಹಿಸಿನೇ ಇತ್ತ ಬಂದೊ." ಬಾಬಣ್ಣಣ್ಣನ ಮನ್ಸ್‌ಗೆ ಅವು ಸರಿ ಚರ್ಮ ಬುಡ್ಸಿರಿಕಿಲೇಂತ ಕಂಡತ್. ಮಾತಾಡ್ತ್‌ಲೆ. ಅದ್ ಹಾಂಗೇನೇ ಆಗಿತ್ತ್. ಇವು ಮಾತಾಡಿಕಂಡ್ ಇರಿಕಾಕನನೇ ಕೊಟಗೆಲಿ ಮುಳ್ಳ್‌ಹಂದಿನ ಗೋಣಿಂದ ತೆಗ್ಟ್ ಅಣ್ಣ ತಮ್ಮ ಮುಳ್ಳ್ ಎಳ್ಕಂಡಿದ್ದೊ.

ಕುಞ್ಞಣ್ಣ ಆಲೆಟ್ಟಿಗೆ ಹೊರ್‌ಟ್‌ಕಂಡಿತ್ತ್. ಅಣ್ಣ ನಾನೂ ಆಲೆಟ್ಟಿಗೆ ಬನ್ನೇಂತ ನಾರಾಯಣ ಹೇಳ್ತ್. ಬಾಂತ ಕುಞ್ಞಣ್ಣ ಹೇಳಿಕೆ ಮುಂದೆನೇ ಅವ ಕುರೆ ಮರ ಹತ್ತಿದಷ್ಟೇ ಬೇಗ ಬೈಕ್‌ನ ಹಿಂದೆನ ಸೀಟ್‌ಗೆ ಹಾರಿ ಕುದ್ದ್ ಪೋಯಣ್ಣಂತ ಹೇಳ್ತ್. ಈಗ ನಾರಾಯಣ ಕುಞ್ಞಣ್ಣನೊಟ್ಟಿಗೆ ಹೊರ್ಟದ್ ಸುಮ್ಮನೆ ಅಲ್ಲ. ಮೊನ್ನೆ ಬೊಳ್ಪುಗೆ ಕೋಪಲಿ ಪ್ರತಿಜ್ಞೆ ಮಾಡ್ದವಂಗೆ ಅವಂಗೇ ಗೊತ್ತಿಲ್ಲದೆ ಪ್ರತಿಜ್ಞೆ ಈಡೇರಿತ್ತ್. ಅವನ ಲೆಕ್ಕಲಿ ಅವಂಗೆ ಕುಞ್ಞಣ್ಣನ ಕಡೆಂದ ಹೆಚ್ಚುವರಿ ತುಟ್ಟಿಭತ್ಯೆ ಸಿಕ್ಕುದೂಂತ ಗೊತ್ತಿತ್ತ್. ಕಬ್ಬಿಣ ಬಿಸಿ ಇರಿಕಾಕನನೇ ಬೊಡ್ದರೆ ಬಗ್ಗುದೂಂತಳೂ ಗೊತ್ತಿತ್ತ್. ಅಂತಾ ವ್ಯವಹಾರ ಎಲ್ಲ ಕುಞಣ್ಣನ ಅಪ್ಪನ, ಅಜ್ಜನ ಎದ್ರ್ ಆದುಲೆ. ಅದ್ಕೆ ಅವ ನಾನೂ ಆಲೆಟ್ಟಿಗೆ ಬನ್ನೇಂತ ಹೊರ್ಟವ. ಅದೊಂದು ರೀತಿಲಿ ಅಡ್ಕಲಿ ಅಡ್ಗಿದಾಂಗೆ. ಎಲ್ಲವ್ಕೂ ಗೊತ್ತಿತ್. ಅಂವ ಯಾಕೆ ಒಟ್ಟಿಗೆ ಹೋತ್‌ಂತ. ಕುಞ್ಞಣ್ಣ, ಅವನ ಹಿಂದೆ ಕೋಸಿಕಂಡ್ ಕುದ್ಕಂಡ್ ನಾರಾಯಣ ಹೋಕಂಡ್ ಇರಿಕಾನ ಗುತ್ತಿನಡ್ಕ ಹೊಸಮೋರಿ ಕರೆಲಿ ನೆಡ್ಜಿಲ್ ಭಟ್ರ ಮಂಜ ನಿತ್ತ್‌ಕಂಡ್ ಇದ್ದೊ. ಅವರ ಕಾಂಬಕನ ಕುಞ್ಞಣ್ಣ ಬೈಕ್ ನಿಲ್ಸಿತ್. ದೂರ ಹೊರ್ಟದ್‌ಂತ ಕೇಳಿಕನ ಆಲೆಟ್ಟಿ

ಸೊಸೈಟಿಗೆಂತ ಅವು ಹೇಳ್ದೊ. ಅವು ಕುಞ್ಞಣ್ಣಂಗೆ ಬೇರೆ ಯಾರೂ ಅಲ್ಲ. ಸಣ್ಣದರ್‌ಂದ ಒಟ್ಟಿಗೇ ಓದಿದವು. ತುಂಬಾ ಸಣ್ಣದರಂದಳೇ ಬಂದ ಗೆಳೆತನ ಈಗೊಳೂ ಹಾಂಗೇ ಇತ್ತ್. ಅವರ ಕಂಡ ಕೂಡ್ಲೆ ಒಮ್ಮೆನೇ ನಡುದಾರಿಲಿ ನಾರಾಯಣನ ಕೈ ಬುಟ್ಟ್ ಕುಞ್ಞಣ್ಣ. "ನೀ ನಡ್ಕಂಡ್ ಬಾ ನಾರಾಯಣ – ನಾ ದನಿಗಳ ಕರ್ಕಂಡ್ ಹೋನೇ"ಂತ ಹೇಳ್ತ್. ನಾರಾಯಣಂಗೆ ನಡಿದು ಏನೂ ದೊಡ್ಡ ಸಂಗತಿ ಅಲ್ಲ. ಅಂವ ಎಷ್ಟ್ ಬೇಗಲಿ ಬಡ್ಡಡ್ಕಲಿ ಬೈಕ್‌ಗೆ ಹತ್ತಿತ್ತೋ ಅಷ್ಟೇ ಬೇಗ ಅದಂರ್ದ ಇಳ್ತ್. ತುಂಬಾ ಸಂಕೋಚದ ಕುಞ್ಞಣ್ಣನ ಫ್ರೆಂಡ್ ಬೇಡಪ್ಪಾ ನಾ ನಡ್ಕಂಡೇ ಹೋವೆಂತ ಹೇಳ್ರೇನೂ ಕುಞ್ಞಣ್ಣ ಬುಟ್ಟತ್ಲೆ. ಬಟ್ರ್ ಈಗ ಅವನ ಬೈಕ್‌ನ ಹಿಂದೆ ಕುದ್ದಿದ್ದೊ. ಬಟ್ರ್ ಈಗ ತುಂಬಾ ವರ್ಷಗಳ ಗೆಳೆತನದ ಬಗ್ಗೆ ನೆನ್ಸಿಕಣ್ತಿದ್ದೊ. ಹೌದು... ಆ ಗೆಳೆತನ ಕುಞ್ಞಣ್ಣನೂ ನೆನ್ಸಿಕಂಡ್ ಇತ್ತ್. ಒಂದ್ ವಿಶೇಷ ಘಟನೆ ಒಂದ್ ಕುಞ್ಞಣ್ಣನ ನೆನ್ಪ್‌ಗೆ ಬಾತ್. ಗೆಳೆತನದ ಒಳಗಿರುವ ಒಂದ್ ಸುಂದರ ನೆನ್ಪು ಅದ್. ಇಬ್ಬರಿಗೂ ಅದ್ ನೆನ್ಪಾಗಿತ್ತ್.

ಬಡ್ಡಡ್ಕ ಸುತ್ತಮುತ್ತ ಮಕ್ಕಳಿಗೆ ಓದಿಕೆ ಇದ್ದದ್ ಹೈಸ್ಕೂಲ್ ಸುಳ್ಯಲಿ ಮಾತ್ರ. ಕುಞ್ಞಣ್ಣನೂ ಹೈಸ್ಕೂಲ್‌ಲಿ ಎಂಟನೇ ಕ್ಲಾಸ್‌ಲಿ ಓದ್ತಿತ್ತ್. ಸುಳ್ಯ ಹೈಯರ್ ಎಲಿಮೆಂಟರಿ ಶಾಲೆಂದಳೂ ನೆಡ್ಚಿಲ್ ಮಾಣಿನೂ ಈ ಬಡ್ಡಡ್ಕ ಹೈದನೂ ಒಟ್ಟಿಗೇ ಓದಿಕಂಡಿದ್ದವು. ಪಿಳ್ಳಿ ಲ್ಯಾಕ್‌ಲಿ ಓದೊಕೂಂತ ಅಜ್ಜನೂ, ಮಂಜ ಲ್ಯಾಕ್‌ಲಿ ಓದಲೀಂತ ಅಪ್ಪನೂ ಈ ಕುಞ್ಞಣ್ಣನ ಸಣ್ಣದರ್ಲೇ ಅಂದ್‌ನ ಅಂತಾ ಕಾಲಲೇ ಬೆಂಗ್ಳೂರ್‌ಲಿ ಶಾಲೆಗೆ ಸೇರ್ಸಿದ್ದೊ, ಮತ್ತೆ ಅಲ್ಲಿಂದ ಮಡಿಕೇರಿಗೆ ಮತ್ತೆ ಕಡೇಗೆ ಸುಳ್ಯಕ್ಕೆ ಸೇರಿಹೋಗಿತ್ತ್. ಓದಿಕೆ ಪೂರಾ ಹಾಳ್ ಅಲ್ಲದಿದ್ದರೂ ಅದರ ಕಡೆಗೆ ಮನ್ಸೇ ಇಲ್ಲದ ಹೈದ ಅಂವ. ಹೇಂಗಪ್ಪಾ ಈ ಹೈದನ ಒಂದ್ ಸರಿದಾರಿಗೆ ತಾದೂಂತ ಬಾಬಣ್ಣಣ್ಣಂಗೆ ಬಾರೀ ಚಿಂತೆ ಇತ್ತ್. ಇದ್ ಯಾವುದೂ ಆ ಪುಣ್ಯಾತ್ಮನ ಮನ್ಸ್‌ಗೆ ಯಾಗೋಳೂ ಕಂಡತ್‌ಲೆ. ಅಂದರೂ ಎಷ್ಟ್ ದೂರ ಹೋದೆನೋ ಅಲ್ಲಿವರೆಗೆ ಓದ್ಸೋಕೂಂತ ಹಟ ಅಪ್ಪಂದ್, ಅಜ್ಜಂದ್. ಅವ್ಕೆ ಅದೊಂದ್ ಮೊರ್ಯಾದಿನ ಪ್ರಶ್ನೆ. ಆದರೆ ಇವಂಗೆ ಒಟ್ಟಾರೆ ದಿನಹೋಕು. ಹಾಂಗಿತ್ತ್ ಪರಿಸ್ಥಿತಿ. ಅಂತೂ ಇಂತೂ ಹೈಯರ್ ಎಲಿಮೆಂಟ್ರಿ ಮುಗ್ಸಿ ಹೈಸ್ಕೂಲ್ ಮೆಟ್ಲ್ ಹತ್ತಿತ್ತ್ ಅಷ್ಟೇ. ಹಾಂಗೇಂತ ಹೇಳ್ರೆ ಅಂವ ಪೂರಾ ಹಾಳಲ್ಲ. ಸುತ್ತೂ ಗೆಳೆಯರ್, ಒಂದ್ ರೀತಿಲಿ ಎಲ್ಲರ ಮನಸೆಳೆವ ವರ್ಚಸ್ಸ್ ಅವಂದ್. ದಿನ ಪೂರಾ ಬೆಡಿ, ತೋಟೆ, ಕೇಪು ಬೆಡಿ, ಚಿಲ್ಲ್, ಪಂದ್‌ಂತ ಅವಂಗೆ ಎಲ್ಲಾ ವಿದ್ಯೆಂದ ಇದರ ಮೇಲೆನೇ ತುಂಬಾ ವ್ಯಾಮೋಹ. ಅಪ್ಪ ಇಲ್ಲದಿರಿಕಾಕನ ಬೆಡಿನ ಮುಟ್ಟಿನೋಡ್ದು, ಗುರಿನ ಒಂಬ್ಸಿ ನೋಡ್ದು. ಆದರೆ ಅವಂಗೆ ಗುಂಡ್ ಹೊಡೆವ

ಅವಕಾಶ ಸಿಕ್ಕಿತ್ತ್ಲೆ. ಅವನ ಅಣ್ಣ – ದೊಡ್ಡ ಆಗ ಬೆಂಗ್ಳೂರಲಿ ಶಾಲೆ ಹೋಕಂಡಿತ್ತ್. ಅಂವ ಎನ್‌ಸಿಸಿ ಲಿ ಇತ್ತ್. ಒಂದ್ ದಿನ ಬೊಳ್ಪುಗೆ ನೋಡ್ರೆ ಅವನ ಫೊಟೋ ನವಭಾರತ ಪೇಪರ್‌ಲಿ ಇತ್ತ್. NCC ಲಿ ಪಾಯಿಂಟ್ ಟು ಟು ಬೆಡಿಲಿ ಗುಂಡ್ ಹೊಡಿವ ಸ್ಪರ್ದೆಲಿ ಅಂವ ರಾಜ್ಯಕ್ಕೇ ದಾಖಲೆಲಿ ಗೆದ್ದ್ ಬಂದಿತ್ತ್. ಅದರ ಕಂಡ ಕುಞ್ಞಣ್ಣಂಗೆ ರೋಮಾಂಚನ ಆಗಿತ್ತ್. ಎಲ್ಲವೂ ದೊಡ್ಡನ ಹೊಗಳ್ತಿದ್ದೊ. ಆಗ ಅವ ಒಂದ್ ಮನ್ಸ್‌ಲೇ ತೀರ್ಮಾನಕ್ಕೆ ಬಂದಿತ್ತ್. ನಾನೂ ಹಾಂಗೆ ಗುರಿ ಹೊಡ್ಯವ ಆಕೂಂತ. ಆದರೆ ಗುಂಡ್ ಹೊಡ್ಯಕೆ ಬೆಡಿ ಕೊಡವು ಯಾರ್? ಅಂತ ದಿನಲಿ ಒಂದ್ ಅವಕಾಶ ಸಿಕ್ಕಿತ್ತ್. ಅವಂಗೆ ಒಬ್ಬ ದ್ರೋಣಾಚಾರ್ಯ ಸಿಕ್ಕಿದ್ದೊ. ಅವರ ಹೆಸರ್ ದೇವಪ್ಪ ನ್ಯಾಕಂತ. ಜನ ಕರಿದು ಗೂನ ದೇವಪ್ಪಾಂತ. ನಿಜಕ್ಕೂ ಗೂನ ಏನ್ ಅಲ್ಲ ಅವು. ಸ್ವಲ್ಪ ಕುಳ್ಳ ಆದರುನೂ ಕಟ್ಟ್‌ಮಸ್ತ್ ಆಳ್. ಅವರ ಕೈಲಿ ಒಂದ್ ಜೋಡ್ ಕೊಳವೆನ ಇಂಗ್ಲೆಂಡ್ ಮೇಡ್ ಕೇಪುನ ಬೆಡಿ ಇತ್ತ್. ಕುಞ್ಞಣ್ಣ ಅಂತಾ ಕೇಪುನ ಬೆಡಿನ ಅದಂರ್ದ ಹಿಂದೆನೂ ನೋಡಿತ್ಲೆ. ಮತ್ತೆನೂ ನೋಡ್ತಲೆ. ಎಂತಾ ಬೆಡಿ ಅದ್. ಭಾರ ಜಾಸ್ತಿ ಇದ್ದರೂ ಹಿಡ್ದ ಗುರಿ ತಪ್ಪದಂತ ರೀತಿ ಕೈಗೆ ಒಂಬುವ ಬೆಡಿ ಅದ್. ಅದರ ನೋಡಿಕನ ಅವನ ಕಣ್ಣ್‌ಗೆ ಅದ್ ಮಿರಿಮಿರಿ ಮಿಂಚಿದಾಂಗೆ ಕಾಣ್ತಿತ್ತ್. ದೇವಪ್ಪಣ್ಣ ನಂಗೆ ಒಂದ್ ಗುಂಡ್ ಹೊಡ್ಯೊಕು, ನಂಗೆ ಕಲ್ಸಿಕೊಡಿ ದಿನ ಇಡೀ ಅವರ ಹಿಂದೆ ರಂದಿಕಂಡ್ ತಿರ್‍ಗ್‌ತಿತ್ತ್. ಬಾಬಣ್ಣಣ್ಣ ಏನ್ ಹೇಳ್ವೆನೋಂತ ದೇವಪ್ಪಣ್ಣ ಗುಂಡ್ ಹೊಡ್ಯಕೆ ಕೊಡಿಕೆ ಹಿಂದೆ ಮುಂದೆ ನೋಡ್ತಿದ್ದೊ. ರಾಜ್ಯಲೇ ಗುರಿ ಹೊಡಿದರ್ಲಿ ಗೆದ್ದ್ ಬಂದ ದೊಡ್ಡಂಗೆ ಈಗ ಯಾವ ಅಡ್ಡಿನೂ ಇತ್ಲೆ. ದೇವಪ್ಪಣ್ಣನೊಟ್ಟಿಗೆ ಹೋಗಿ ಹಕ್ಕಿಗಳಿಗೆ ಗುಂಡ್ ಹೊಡ್ಯತ್ತಿತ್ತ್. ನೀರ್ ಕುಳ್ಮದ ಮರಕ್ಕೆ ಹಣ್ಣ್ ತಿಂಬಕೆ ಬಾವ ಕಾಳಿಂಗ, ಕೇನೆಮಂಜೊಳು, ಏಳಿಂದ್ಲೆ ಹಕ್ಕಿಗಳ ಹೊಡ್ಯಕೆ ಒಬ್ಬನೇ ಹೋಗ್ತಿತ್ತ್. ಕುಞ್ಞಣ್ಣನ ಕೈ ತೊರ್ಸಿಕಂಡಿತ್ತ್. ಆದರೆ ಯಾರ ಬೆಂಬಲನೂ ಇತ್ಲೆ. ಅವಂಗೆ ಗೊತ್ತಿತ್ತ್. ಅವನ ಪ್ರಾಯಂದಳೂ ಕಡಿಮೆ ವಯಸ್ಸ್‌ಲಿ ಅವನ ಅಪ್ಪ ಬಡ್ಡಡ್ಕ ಬಾಬಣ್ಣ ಎಂಟ್ ಜನರ ಹೊರೆನ ದೊಡ್ಡ ಕಡೆನ ಹೊಡ್ದೊಳೊಂತ. ಅಪ್ಪಯ್ಯಜ್ಜನ ಬಗ್ಗೆ ಹೇಳದವು ಯಾರ್. ಯಾಕೆ ನಂಗೆ ಮಾತ್ರ ಬೆಡಿ ಸಿಕ್ಕುದುಲೇಂತ ಅವಕಾಶಕ್ಕಾಗಿ ಕಾದ್‌ಕಂಡೇ ಇತ್ತ್. ಅವನ ಮನ್ಸ್‌ಲಿನೂ ಅಪ್ಪನಾಂಗೆ ದೊಡ್ಡ ಬೇಟೆಮಾಡಿ ಸಣ್ಣ ಪ್ರಾಯಲೆ ಹೆಸರ್ ತರೋಕೂಂತ ಕಾದ್‌ಕಂಡೇ ಇತ್ತ್. ಅಂತದರ್ಲಿ ಒಂದ್‌ದಿನ ಸುರೂನ ಗುಂಡ್ ಹೊಡಿವ ಅವಕಾಶ ಸಿಕ್ಕಿತ್ತ್. ಅಂದ್ ಪೂಮಲೆ ಕಾಡ್‌ಗೆ ಕೂಡ್ ಬೇಟೆಗೆ ಹೋದೂಂತ ಎಲ್ಲವು ನಿಗಂಟ್ ಮಾಡಿದ್ದೊ. ತಿಂಗಳಿಗೊಮ್ಮೆ, ಎರ್‍ಡ್ ಸರ್ತಿನೋ ಹಾಂಗೆ ತೀರ್ಮಾನ ಮಾಡಿಕಂಡ್ ಪೂಮಲೆಗೆ ಬೇಟೆಗೆ ಹೋಗ್ತಿದ್ದೊ. ಹಾಂಗೆ

ಹೋಕನ ನಲ್ವತ್ತ್ ಐವತ್ತ್ ಜನ ಹತ್ತಿಪ್ಪತ್ತ್ ಬೆಡಿ, ನಾಯಿಗ ಎಲ್ಲಾ ಇರ್ತಿದ್ದೊ. ಯಾಕೆಂತ ಹೇಳ್ರೆ ಪೂಮಲೆ ದೊಡ್ಡ ಕಾಡ್, ಕಾಡ್ ಹೊಡ್ಯಕೆ ಜನಗಳೂ ತುಂಬಾ ಬೇಕಾದವೆ. ಅಂದ್ ಹಾಂಗೆ ತೀರ್ಮಾನ ಮಾಡಿ ಬೊಳ್ಪುಗೆ ಬೇಗ ಹೊರ್ಟ್‌ಕಂಡಿದ್ದೊ. ಬೆಂಗ್ಳೂರ್‌ಲಿ ಇದ್ದ ದೊಡ್ಡ ಯಾವುದೋ ರಜೆಲಿ ಬಂದವ ಮನೇಲೆ ಇತ್ತ್. ಎಲ್ಲವರ್ಂದ ಮುಂದೆ ಅವನೂ ಹೊರ್ಟ್ ನಿತ್ತಿತ್ತ್. ಅವನ ಕರ್ಕಂಡ್ ಹೋಕೆ ಅವನ ಅಪ್ಪಂಗೆ ಮನ್ಸ್ ಇತ್ಲೆ. ಅಂದರೂ ಹೇಂಗೋ ಏನೋ ಮಾಡಿ ಒಪ್ಪಿಸ್ತ್. ಇದರೆಲ್ಲ ನೋಡಿ ಕುಞ್ಞಣ್ಣಂಗೆ ತಡ್ಯಕೆ ಆಕ್ತಿಲ್ಲೆ. ಆದರೆ ಏನ್ ಮಾಡ್ದು. ಅಣ್ಣಂಗೆ NCC ಲಿ ಗುಂಡ್ ಹೊಡ್ದ್ ಹೆಸರ್ ಬಂದಾಗಿತ್ತ್. ಗುರಿ ಹೊಡ್ಯಕೆ ಗೊತ್ತಿತ್ತ್. ಇವಂಗೆ ಅಂತ ಯಾವ ಅರ್ಹತೆನೂ ಇತ್ಲೆ. ಹಾಂಗೆ ಅವನ ಬೇಡಿಕೆಗೆ ಬೆಲೆನೇ ಬಾತ್ಲೆ. ಹಿಂದೆನ ದಿನನೇ ಮನೆಗೆ ಬಂದಿದ್ದ ದೇವಪ್ಪಣ್ಣ ಅವರ ಬೆಡಿಗೆ ಯಾಗಳೋ ತುಂಬ್ಸಿದ ಈಡ್ ಕಾಲಿ ಮಾಡಿ ಹೊಸ್ತ್ ತುಂಬ್ಸುವ ಕೆಲ್ಸಲಿದ್ದೊ. ಈಡ್ ಕಾಲಿ ಮಾಡ್ತೊಂತ ಹೇಳ್ರೆ. ಬೆಡಿಲಿದ್ದ ಚಿಲ್ಲ್ ತೆಗ್ದ್, ಮೊದ್ದ್‌ನನೂ ತೆಗ್ದ್ ಮೇಪುಳ್ಳ್‌ಗೆ ಕಡ್ಡಿ ಗೀರಿನೋ, ಕೇಪು ಹಿಸಿನೋ ಉಳ್ದ ಮೊದ್ದ್‌ನ ಸುಟ್ಟ್ ಬೇರೆ ತುಂಬ್ಸುದು. ಅಂತ ಕೆಲ್ಸಲಿ ಅವು ಇರಿಕನ ಅಣ್ಣ ನಾ ಗುಂಡ್ ಹೊಡ್ತ್ ಈಡ್ ಕಾಲಿ ಮಾಡೋಕೋಂತ ಕೇಳ್ತ್. ಯಾವ ಸಮಯಲಿ ಅವ ಕೇಳ್ತೊ " ಕೊಡ್ ದೇವಪ್ಪ ಅಂವ ಗುಂಡ್ ಹೊಡ್ಯಲಿ" ಅವನೇ ಆಶ್ಚರ್ಯ ಪಡುವಂಗೆ ಅಪ್ಪ ಹೇಳ್ದೊ. ಸರೀಂತ ಹೇಳ್ದ ದೇವಪ್ಪ ಅಂಗಳಕ್ಕೆ ಬಂದ್ ಯಾವ್ದಾರ್ ಗುರಿಗೆ ಹೊಡ್ಯಲೀಂತ ಮೇಲೆ ನೋಡ್ತ್. ಅಂಗಳದ ಆಚೆಗಿದ್ದ ದೊಡ್ಡ ಕಾಡ್‌ಮಾವಿನ ಮರಲಿ ಕಕ್ಕೆ ಒಂದ್ ಕುದ್‌ಕಂಡ್ ಇತ್ತ್. ಜಾಗ್ರತೇಂತ ಹೇಳಿ ಕುದ್ರೆನ ಎಳ್ದ್ ಗುರಿ ಹೇಂಗೆ ನೋಡುದೂಂತ ದೇವಪ್ಪಣ್ಣ ಹೇಳ್ತ್. ಅದರ ಅವಶ್ಯಕತೆ ಅವಂಗೆ ಇತ್ಲೆ. ಅವಂಗೆ ಅದೆಲ್ಲಾ ಗೊತ್ತಿತ್ತ್. ಬೆಡಿ ಸೊಲ್ಪ ಬಾರಾಂತ ಕಾಣ್ತಿತ್ತ್. ಮನೆ ಮುಂದೆ ಇದ್ದ ಸಣ್ಣ ಪಾಂಡಿ ಮರದ ಒಂದ್ ಗೆಲ್ಲುಗೆ ಕೊಳವೆನ ಹಿಸಿ ಕಕ್ಕೆಗೆ ಗುರಿನೋಡಿ ಕಳ್ಳನ ಎಳ್ತ್. ಡೀಂ... ಕುಞ್ಞಣ್ಣ ಸುರೂನ ಗುಂಡ್ ಹೀಂಗೆ ಹೊಡ್ದದ್. ಅವನ ಗುರಿ ಕಕ್ಕೆಗೆ ತಾಂಗಿತ್ತ್. ಒಮ್ಮೆ ಅದ್ ಮರಂದ ಕೆಳಗೆ ಬಿದ್ದರೂ ಸತ್ತಿಲ್ಲೆ. ಎಲ್ಯೋ ಅದ್ಕೆ ಒಂದೆರ್ಡ್ ಚಿಲ್ಲ್ ಮಾತ್ರ ಹೆಟ್ಟಿರೊಕು. ಆ ಕಕ್ಕೆ ಮಾತ್ರ ಸರಿ ಹಾರಿಕಾಗದೇ ಇತ್ತ ಜೀವನೂ ಹೋಗದೇ ತೋಟಲಿ ಅಲ್ಲಿ ಇಲ್ಲಿ ಕುಞ್ಞಣ್ಣಂಗೆ ಅದರ ಬಾಸೆಲಿ ಬೊಯ್ಕಿಂಡ್ ಸುತ್ತಾಡ್ತಿತ್ತ್. ಕೇಪುನ ಬೆಡಿಲಿ ಗುಂಡ್ ಹೊಡ್ದವಂಗೆ ಈಗ ಮನೆ ಬೆಡಿಲಿ ಹೊಡ್ಯೋಕುಂತ ಆಸೆ ಆಗಿತ್ತ್. ಅದ್ಕೆ ಕಾದ್‌ಕಂಡ್ ಇತ್ತ್.

ಅಂದ್‌ನ ಪೂಮಲೆ ಬೇಟೆಗೆ ಸುಮಾರ್ ನಲ್ವತ್ತ್ ಜನ ಸೇರಿದ್ದೊ. ಆ ದಿನ ಅವು ಅರಂಬೂರ್ ಡಿಪೋದ ಎರ್ದ್‌ಲಿ ಕಾಡಿಗೆ ಹತ್ತಿದ್ದೊ. ಡಾಮಾರ್

ಮಾರ್ಗಂದ ಸುಮಾರ್ ಒಂದ್ ಮೈಲ್ ಒಳಗೆ ಹೋದಮೇಲೆ ಎಲ್ಲವೂ ಒಟ್ಟಿಗೆ ಸೇರಿ ಎಲ್ಲಿಂದ ಕಾಡ್ ಹೊಡಿದು, ಎಲ್ಲೆಲ್ಲಿ ಬಿಲ್ಲ್‌ಗೆ ನಿಲ್ಲುದು ಎಲ್ಲಾ ತೀರ್ಮಾನ ಮಾಡಿಕಂಡೊ. ಆ ಕಾಡ್‌ಲಿ ಬಿಲ್ಲ್‌ಗೆ ನಿಲ್ಲುವ ಗಂಡಿಂದ ಗಂಡಿಗೆ ಕಿ.ಮೀಟರ್‌ಂದಳೂ ದೂರ ಇರ್ತಿತ್. ನಡುಲಿ ಯಾರೂ ಬಿಲ್ಲ್‌ತೆಗಿಯಕೆ ಆಗದ್‌ಂತ ಮಾತಾಡಿಕಂಡೊ. ಆ ದಿನ ಬೇಟೆಲಿ ಅಪ್ಪಯ್ಯಜ್ಜ, ಕೂಟೇಲ್ ಕೃಷ್ಣಣ್ಣ, ಡಿಲ್ಲಿ ಐತ್ತಪ್ಪಣ್ಣ, ದಾಸಪ್ಪಣ್ಣ, ಸುಳ್ಯದ ಒಂದೆರ್ಡ್ ಸ್ಯಾಬರ್‌ಗ ಎಲ್ಲವೂ ಸೇರಿದ್ದೊ. ಇದ್ದವರ್ಲಿ ಸಣ್ಣವೂಂತ ಹೇಳ್ರೇ, ದೊಡ್ಡನೂ, ಕುಡಕಲ್ಲ್ ಕೇಪಣ್ಣನೂ. ಒಟ್ಟಿಗೆ ಮಂಜ ಇದ್ದದಂರ್ದ ಬಾಬಣ್ಣಂಗೆ ಸ್ವಲ್ಪ ಕಾಲ್‌ಕಟ್ಟು ಆಗಿತ್. ಸುರೂಗೆ ಬೇಟೆಗೆ ಬಂದವ, ಪೂಮಲೆ ಗೊತ್ತಿಲ್ಲದವ, ಹಾಂಗಾಗಿ ಅವನನೂ ಕೇಪಣ್ಣನನೂ ಅವರ ಹಕ್ಕಲೇ ಒಂದ್ ದೊಡ್ಡ ಮರದ ಕೆಳಗೆ ನಿಲ್ಸಿ ಅಲ್ಲಿಯೇ ಅವು ಬಿಲ್ಲ್‌ಗೆ ನಿತ್ತೊ. ಕಾಡ್‌ನವು ಕಾಡ್ ಹೊಡ್ಯಕೆ ಸುರುಮಾಡ್ದೊ. ಅವರ ಬೊಬ್ಬೆ ಜೋರ್‌ಲಿ ಕೇಳಿಕಂಡ್ ಹಕ್ಕಲೆ ಹಕ್ಕಲೆ ಬರ್ತಿತ್. ಪ್ರಾಣಿಗ ಕಂಡರೆ ಕಾಡ್ ಹೊಡ್ಯವು ಕರ್ದ್ ಹೇಳಿವೆ. ಅಂತದ್ ಯಾವುದು ಇಲ್ಲೆ. ಸುಮಾರ್ ಹೊತ್ ಓಂಗೇ ಕಳ್ತ್. ಅಷ್ಟ್ ಹೊತ್ತಿಗೆ ಮೇಲೆಂದ ತುಂಬಾ ಮೇಲೆ ಮೊಟ್ಟೆಂದ ಒಂದ್ ಗುಂಡ್ ಕೇಳ್ತ್. ಗುಂಡ್‌ನ ಶಬ್ದ ಕೇಳ್ದ ತಕ್ಷಣ ಕಾಡ್ ಹೊಡ್ಯವರ ಬೊಬ್ಬೆ ಉತ್ಸಾಹಲಿ ಒಮ್ಮೆನೇ ಜಾಸ್ತಿ ಆಗಿತ್. ಯಾರ್ ಗುಂಡ್ ಹೊಡ್ದದ್ದ್ ಎಂತದಕ್ಕೆ ಹೊಡ್ದದ್ ಒಂದೂ ಗೊತ್ತಾತ್ಲೆ. ಕಾಡ್ ಹೊಡ್ಯವು ಹೊಡ್ಕಂಡೇ ಇದ್ದೊ. ಒಂದ್ ಐದ್ ಮಿನಿಟ್ ಕಳ್ದಿರ್ದು. ಕಾಡ್ ಹೊಡ್ಯವರ ಬೊಬ್ಬೆ ಮುಗಿಲ್ ಮುಟ್ಟಿತ್. ಆ ಬೊಬ್ಬೆನ ನಡುಲಿನೂ ಒಂದ್ ಮಾತ್ ಸ್ಪಷ್ಟಕೇಳಿಕಂಡ್ ಇತ್. ಬೊಡ್ಡಡ್ಕ ಅಣ್ಣಾ ಒಂಟಿ ಕಾಟಿ ಎದ್ದುಟು. ಅದ್ ನಮ್ಮ ಬೆರ್ಸಿದೆ ಬನ್ನೀಂತ. ಅಷ್ಟ್ ಜನ ಸೇರ್ದ ಬೇಟೆಲಿ ಹಾಂಗೆ ಯಾವ ಪ್ರಾಣಿಗಳೂ ಜೀವ ಭಯಲಿ ಎದ್ದ್ ಓಡಿವೆನೇ ಹೊರ್ತ್ ಎದ್‌ರ್ಸಿ ನಿಲ್ಲುದು ಬಾರೀ ಕಡಿಮೆ. ಭಾರೀ ಅಪರೂಪಕ್ಕೆ ಒಂಟಿ ಹಂದಿ, ಒಂಟಿ ಕಾಡ್‌ಕೋಣಂಗ ಆ ರೀತಿ ವರ್ತಿಸಿದೆ. ಆನೆಗಳಲಿನೂ ಹಾಂಗೆ ಉಟ್ಟು. ಗಂಡ್ ಆನೆ ಆದರೂ ದಾಡೆ ಇಲ್ಲದ ಆನೆಗಳ ಮಖಾನಾಂತ ಕರ್ದವೆ. ಮಖಾನಾಂತ ಹೇಳ್ರೆ ಒಂದ್ ರೀತಿಲಿ ಗಂಡೂ ಅಲ್ಲ ಹೆಣ್ಣು ಅಲ್ಲದ ತರ. ಅಂತವು ಯಾವುದಕ್ಕೂ ಹೆದುರ್ದುಲೆ. ಅವು ಸಾಮಾನ್ಯ ಅಗಿ ಆಕ್ರಮಣಕಾರಿ ಆಗಿದ್ದವೆ. ಅದೇ ರೀತಿ ಅಲ್ಲದಿದ್ದರೂ ಸಂಪೂರ್ಣ ಬೆಳ್ದ್ ನಿತ್ತ ಕಾಟಿಗ ಒಂಟಿಯಾಗಿ ಇರಿಕೆ ಇಷ್ಟಪಡವು. ಅವುನೂ ಹಾಂಗೆನೇ ಇದ್ದವೆ. ಅವ್ಕೆ ಯಾವ, ಯಾರ ಹೆದ್ರಿಕೆನೂ ಇರ್ದುಲೆ. ಅಂತಾ ಒಂದ್ ಕಾಟಿ ಆ ಕಾಡ್‌ಲಿ ಇತ್. ಜನರ ಬೊಬ್ಬೆ ಎಲ್ಲಾ ಕೇಳಿಕಂಡಿದ್ದರೂ, ತಡ್ಯಕೆ ಬೊತ್ತದಾಕನ ಅದ್ ಎದ್ದ್ ನಿತ್ತಿತ್. ಅದರ ವಿಶ್ರಾಂತಿಗೆ ಅಡ್ಡಿ ಆಗಿತ್. ಥತ್। ಇದ್ಯಾವ ರಗಳೇಂತ ಮಲ್ಗಿದ್ದ ಬಿದ್ದ ಮರದ

ಅಡ್ಡಂದ ಒಮ್ಮೆನೇ ಎದ್ದ್ ನಿತ್ತಿತ್. ಅದ್ಭುತ, ಅಸಾಮಾನ್ಯ ದೇಹಾಕಾರ. ಸಮೃದ್ಧ ಕಾಡ್‌ಲಿ ಸಮೃದ್ಧಿಯಾಗಿ ಬೆಳ್ದ್ ನಿತ್ತ ಭಯಾನಕ ಆಕೃತಿನ ದೊಡ್ಡ ಕಾಟಿ. ಅದರ್ದೇ ಲೋಕಲಿದ್ದ ಅದ್ ಎದ್ದ ನಿತ್ತ್ ನೋಡಿಕಾಕನ ಕಂಡರ್ದ್ ಅದ್ಕೆ ಆಶ್ಚರ್ಯ ಆಗುವಾಂಗಿತ್ತ್. ಎದ್ರ್ ಇದ್ದದ್ ಶತ್ರು ಒಂದೇ ಅಲ್ಲ. ಅಲ್ಲಿ ಬೊಬ್ಬೆ ಹೊಡ್ಕಂಡ್ ಕಾಡ್ ಕದಲ್ಸಿಕಂಡ್ ಇದ್ದೊ ಸುಮಾರು ಶತ್ರುಗ. ಒಮ್ಮೆನೇ ಅದ್ ತಬ್ಬಿಬ್ಬಾಗಿತ್ತ್. ಯಾರ ಮೇಲೆ ಆಕ್ರಮಣ ಮಾಡ್ದು ಸುತ್ತೂ ಶತ್ರುಗ ಅದರ ಮನ್ಸ್‌ಗೆ ಏನ್ ಕಂಡತೋ ಗೊತ್ತ್ಲೆ. ಒಮ್ಮೆನೇ ಮುಂದೆ ನುಗ್ಗಿತ್ತ್. ಅದ್ಕೆ ಯಾವ ಹೆದ್ರಿಕೆನೂ ಇತ್ಲೆ. ಅದಕೆ ಕಂಡದ್ ಒಂದೇ ಸತ್ಯ. ಇವೆಲ್ಲಾ ನಂಗೆ ಯಾವ ಲೆಕ್ಕಾಂತ. ಅದ್ ಆ ಕಾಡ್‌ಲಿ ಹುಟ್ಟಿದ ಒಂದ್ ಅಸಾಮಾನ್ಯ ದೇಹನ ಹೊಂದಿದ ಅತೀ ಬಲಿಷ್ಟ ಕೋಣ. ಅದರ ಕಣ್ಣ್‌ಗ ಈಗ ಕೆಂಡದ ಉಂಡೆನಾಂಗಿತ್ತ್. ಹೆಜ್ಜೆ ಹಿಂದೆ ಹಿಸುವ ಹೇಡಿ ಅದಲ್ಲ. ಅದ್ ಯಾವುದೂ ಯೋಚನೆ ಮಾಡದೆ ಅದರ ದೃಷ್ಟಿಗೆ ಎದ್‌ರಿದ್ದವನ ಕಡೆ ನುಗ್ಗಿ ಬಂದಿತ್ತ್. ಅದರ ಕಂಡಾಕನನೇ ಹೆದ್ರಿದ್ದ ಆ ಹೈದ ಅದ್ ಒಂದ್ ಕುತ್ತ್ ತೆಗಿದರೊಳಗೆ ಹಕ್ಕಲೇ ಇದ್ದ ಮರ ಹತ್ತಿತ್ತ್. ಅವಂಗೆ ಗೊತ್ತಿತ್ತ್ ಯಾರ್ ಎಲ್ಲಿ ನಿತ್ತಿರುವೋಂತ. ಒಂದ್ ನಾಲ್ಕ್ ಮಾರ್ ಹತ್ತಿದವನೇ ಬೊಬ್ಬೆ ಹೊಡ್ತ್. ಓ ಬಡ್ಡಡ್ಕ ಅಣ್ಣ ಕಾಟಿ ನಮ್ಮ ಬೆರ್ಸಿದೇಂತ. ಆ ಬೊಬ್ಬೆ ದೂರಲಿ ನಿತ್ತಿದ್ದ ಅಪ್ಪಯ್ಯಜ್ಜಂಗೆ ಅವಂರ್ದ ಆಚೆ ನಿತ್ತ ದೇವಪ್ಪಂಗೆ ಎಲ್ಲವ್ಕೂ ಕೇಳ್ತ್. ಎಲ್ಲವೂ ಮುಂದೆನ ಕ್ಷಣನ ಕಾಡ್‌ಕಂಡ್ ಇದ್ದೊ. ಆ ಬೇಟೆ ಒಂದ್ ರಣರಂಗದಾಂಗೆ ಆಗಿ ಹೋಗಿತ್ತ್. ಚಕ್ರವ್ಯೂಹದ ಒಳಗಿನ ಅಭಿಮನ್ಯನಾಂಗೆ, ಆ ಒಂಟಿ ಸದೃಢ ಕಾಟಿ ಅವರೆಲ್ಲವರ ಧಿಕ್ಕರಿಸಿ ನಿತ್ತಿತ್ತ್. ಅದ್ ಒಂದ್ ಹೆಜ್ಜೆ ಹಿಂದೆ ಹಿಸಿಕೆನೂ ಮನ್ಸ್ ಮಾಡ್ತ್‌ಲೆ. ಅದ್ಕೆ ಅದರ ಬಗ್ಗೆ ಅಪಾರ ನಂಬಿಕೆ ಇತ್ತ್. ವಿಪರ್ಯಾಸ! ಅದ್ಕೆ ಗೊತ್ತಿದ್ದದ್ ಕಾಡನ ರೀತಿ ನೀತಿ ಮಾತ್ರ. ಕಾಟಿಗೆ ಹೆರ್ದ್ ತುಂಬಾ ಕಾಡ್ ಹೊಡ್ಯೊವು ಮರನೋ ಬೊಳ್ಳಿನೋ ಹತ್ತಿ ನಿತ್ತಿದ್ದೊ. ಅಪ್ಪಯ್ಯಜ್ಜಂಗೆ ಗೊತ್ತಾತ್. ಒಂಟಿ ಕಾಟಿ. ಅದ್ ಸುಮ್ಮನೆ ಇರಿಕಿಲೇಂತ. ಅವಂರ್ದ ಅದ್ ದೂರಲಿತ್ತ್. ಬಾಬಣ್ಣಂಗೆ ಅದ್ ಹಕ್ಕಲೆ ಇರೊಕೂಂತ ಆತ್. ಸಾಮಾನ್ಯ ಬೇಟೆಲಿ ಕಾಟಿಗಳ ಇಲ್ಲಿ ಅವು ಹೊಡ್ಯ್‌ತ್ತಿಲ್ಲೆ. ಆದರೆ ಈಗ ಪರಿಸ್ಥಿತಿ ಬೇರೆ. ಒಂಟಿ ಕಾಟಿ ಒಂದ್ ಯುದ್ದನ ಸಾರಿತ್ತ್. ಅಪ್ಪಯ್ಯಜ್ಜ ಅಲ್ಲಿಂದಳೇ ಕರ್ದ್ ಹೇಳ್ದೊ. ಬಾಬಣ್ಣಾ ಅದರ ಬುಡ್ಡಡ ಹೊಡೀಂತ. ಆ ಅಧಿಕಾರವಾಣಿ ಹೇಂಗಿತ್ತ್‌ಂತ ಹೇಳ್ರೆ ಹೊಯ್....ಸಳ...ಂತ ಹೇಳ್ದಾಂಗಿತ್ತ್. ಕೇಪಣ್ಣ, ದೊಡ್ಡ, ನಿತ್ತ ಮರಕ್ಕೆ ಒಂದ್ ಮಾರ್ ಮೇಲೆ ಒಂದ್ ದೊಡ್ಡ ಗಂಡಿ ಇತ್ತ್. ಅದೆಷ್ಟ್ ದೊಡ್ಡ ಮರಾಂತ ಹೇಳ್ರೆ ಆ ಗಂಡಿ ಒಳಗೆ ನಾಲ್ಕ್ ಜನ ಸಲೀಸಾಗಿ ಕುದ್ರುವಾಂಗಿತ್ತ್. ಬಾಬಣ್ಣ ಹೇಳ್ದೊ ಮೇಲೆ ಹತ್ತಿ ಆ ಗಂಡಿಲಿ ಕುದ್ರೀಂತ

ಅಷ್ಟೊತ್ತಿಗೆ ನೆಲಲಿ ಕುದ್ರುದರಂದ ಆ ಮರಲೇ ಕುದ್ದುರ್ದು ಒಳ್ಳೆದ್‌ಂತ ಅವು ಆಗಳೇ ಕುದ್ದಿದ್ದೋ. ಅವು ಎಂತಾ ಅದೃಷ್ಟ ಪಡ್ಡಿದ್ದೊಂತ ಹೇಳ್ರೇ ಆಶ್ಚರ್ಯ ಆದೆ. ಸುಮಾರ್ ಮುವ್ವತ್ತ್ ವರ್ಷಗಳ ಹಿಂದೆ ಹೀಂಗೆ ಮರ ಹತ್ತಿ ಪಿಜಿನ ನೋಡಿತ್ತ್. ಅಂದ್ ಒಂದ್ ಹುಲಿ ಒಂದ್ ಬಲಿ ಆವ ಸಾಧ್ಯತೆ ಇತ್ತ್. ಇಂದ್ ಹುಲಿ ಅಲ್ಲ ಬರೇ ಕಾಟಿ. ಒಂದ್ ವೇಳೆ ಆ ಕಾಟಿನ ನಿಯಂತ್ರಣ ಮಾಡದಿದ್ದರೆ, ಬೀಳ್ತಾ ಇದ್ದದ್ ಬರೇ ಒಂದ್ ಹೆಣ ಅಲ್ಲ. ಒಂಟಿ ಕೊಳವೆ ಬೆಡಿನವು ಬಾರೀ ಅವಶ್ಯಕತೆಗಾಗಿ ಬೆಡಿನ ಮುರ್ದ್ ಎಷ್ಟ್ ಬೇಗನೋ ಅಷ್ಟೇ ಬೇಗ ತುಂಬ್ಸಿಕಾಗಿ ಒಂದೆರಡ್ ತೋಟೆಗಳ ಬೆರಳ್ ಸಂದಿಲಿ ಹಿಸಿಕಂಡವೆ. ಆದರೆ ಜೋಡ್ ಕೊಳವೆನವು ಆ ತರ ಹಿಸಿಕಂಬೊದುಲೆ. ಒಂದ್ ಗುಂಡ್ ತಪ್ಪಿರೆನೂ ಇನ್ನೊಂದರ ಹೊಡ್ದ್ ಗೆಲ್ಲುವ ಧೈರ್ಯ ಅವ್ಕೆ ಇದ್ದದೆ. ಆದರೆ ಇಂದ್ ಅದೆಲ್ಲಾ ಬೊಬ್ಬೆಗಳ ಕೇಳಿಕಾಕನ ಹೊಸ ತೀರ್ಮಾನ ತೆಕಂಡ ಬಾಬಣ್ಣ ತೋರ್, ಉಂಗುರ ಬೆರಳಿನ ನಡುಲಿ ಎರ್ಡ್ ತೋಟೆಗಳ ಕೋಸಿ ಹಿಸಿಕಂಡೊ. .. ಪಂಡ್ ಸುಮಾರ್ ಮೂವತ್ತ್ ವರ್ಷಗಳ ಹಿಂದೆ ಹೀಂಗೆ ನಡ್ಡಿತ್ತ್. ಕಡೇ ಕ್ಷಣಲಿ ಅಪ್ಪಯ್ಯಜ್ಜ ಹುಲಿ ಮರಿಗಳ ಹಿಡ್ಕಣೇಂತ ಹೋಕನ ಅವ್ಕೆ ಗೊತ್ತಿಲ್ಲದೇ ಬೆಡಿನ ಎರ್ಡೂ ಕುದ್ರೆನ ಎಳ್ದಿದ್ದೊ. ಅಂತದೇ ರೀತಿಲಿ ಇಂದ್ ಆಗಿ ಹೋಗಿತ್ತ್ ಬೆಡಿಲೆರ್ಡ್ ತೋಟೆ ಇತ್ತ್. ಮೂರ್ ಬೆರ್‍ಳ್‌ನ ನಡುಲಿ ಮತ್ತೆರ್ಡ್ ತೋಟೆ ಇತ್ತ್. ಎತ್ತಂದ ಬೊಬ್ಬೆ ಕೇಳ್ತೋ ಅತ್ತ ಓಡ್ದೊ ಬಾಬಣ್ಣ. ಒಟ್ಟಿಗೇ ಕರ್ದ್ ದೇವಪ್ಪಂಗೆ ಹೇಳಿಕಂಡೇ ಓಡ್ದೋ ನಾ ನಿತ್ತಲ್ಲಿಗೆ ಬಾಂತ.

ಇದ್ ಹುಲಿ ಬೇಟೆ ಅಲ್ಲ. ಹೆಚ್ಚಿನ ಮಹತ್ವ ಏನೂ ಇತ್ಲೆ. ಅಲ್ಲಿ ಇದ್ದದ್ ಪ್ರಾಣಭಯ ಮಾತ್ರ. ಸುಮಾರ್ ನಲ್ವತ್ತ್ ಜನಕ್ಕೂ ಹೆಚ್ಚಿದ್ದ ಜಾಗೆಲಿ ಒಂದ್ ಮದೋನ್ಮತ್ತ ಕಾಟಿ ಯುದ್ಧ ಸಾರಿತ್ತ್. ಅದರ ಇಂದ್ ಎದ್‌ರ್ಸಿ ಹೊಡಿಯದ್ದಿದ್ದರೆ ಇತ್ತ ಪ್ರಾಣಾಪಾಯ ಇತ್ತ್. ಕುದ್ರೆನ ಎರ್ಡನ್ನೂ ಎಳ್ಕಂಡೇ ಅತ್ತ ಓಡಿಕಂಡ ಇದ್ದ ಬಾಬಣ್ಣಂಗೆ ಕಂಡತ್ ಆ ದೊಡ್ಡ ಕಾಟಿ. ಅದ್ ಕಾಟಿನೋ, ಆನೆನೋ, ಹಾಂಗಿತ್ತ್ ಆ ಕಾಟಿ. ಒಬ್ಬನೇ ಎದ್ರ್‌ಗಿದ್ದಿದ್ದರೆ ಅದ್ ಆಗಳೇ ಒಂದ್ ಜೀವ ತೆಗಿಯುತ್ತಿತ್ತೋ ಏನೋ, ಕಣ್ಣೆದುರು ಹತ್ತಾರ್ ಶತ್ರುಗ ಇರಿಕಾಕನ, ಒಬ್ಬನ ಓಡ್ಸಿ ಮತ್ತೊಬ್ಬನ ಓಡ್ಸಿಕಂಡಿದ್ದ ಕಾಟಿಗೆ ಒಮ್ಮೆನೇ ಹಿಂದೆ ಯಾರೋ ಒಳೋಂತ ಆಗಿ ತಿರ್ಗಿ ನಿತ್ತತ್. ಆಗ ಅದ್ಕೆ ಕಂಡದ್ ಬಾಬಣ್ಣ. ಒಂದ್ ಕಡೆಲಿ ತುಂಬಾ ಜನ, ಒಂದ್ ಕಡೆಲಿ ಒಬ್ಬನೇ, ಅದ್ಕೆ ಕಂಡತ್ ಇವನ ನಾ ಉಳ್ಸಿಕಾಗದ್‌ಂತ. ಅದರೆಲ್ಲಾ ಕೋಪ ತಾಪಗ ಈಗ ಎದುರ್ಗೆ ಇರುವ ಬಾಬಣ್ಣನ ಮೇಲಿತ್ತ್. ತಿರ್ಗಿ ನಿತ್ತ್ ಅವನನೆ ಧಿಕ್ಕರ್ಸಿ ನೋಡಿಕಂಡ್ ಇದ್ದ ಅದ್ ಮುಂದೆನ ಕಾಲ್‌ನ ಗೊರ್ಸ್‌ನ ಒಮ್ಮೆ ನೆಲಕ್ಕೆ ಉಜ್ಜಿ ಹಿಂದೆ ಎಳ್ದ್ ಮುಂದೆ ಹೆಜ್ಜೆ ಹಿಸಿತ್. ಅದ್ ಹೆಜ್ಜೆ ಮೇಲೆ ಎತ್ತಿ

ನೆಲಕ್ಕೆ ಊರಿಕೆ ಮುಂದೆ ಬಾಬಣ್ಣನ ಸುರೂನ ಗುಂಡ್ ನೆತ್ತಿ ಮದ್ಯಲಿ ಬೊಟ್ಟ್ ಹಿಸಿದಾಂಗೆ ಬೀತ್. ಒಂದ್ ಕ್ಷಣ ಅಂತಾ ಅಗಾಧ ಶಕ್ತಿನೇ ನಿತ್ತ್ ಹೋಗಿತ್ತ್. ಏನಾದೆ ನೆನ್ಸಿಕೆನೇ ಸಾಧ್ಯ ಇತ್ಲೆ. ಹುಗ್ಗಿದ ಗುಂಡ್‌ನ ಒಟ್ಟೆ ಒಳಗೇ ಮತ್ತೊಂದ್ ಲೀತಾಲ್ ಬಾಲ್ ಒಂಟಿಗುಂಡ್ ಹೊಕ್ಕಿ ಒಳಗೆ ಹೋಗಿತ್ತ್. ಮರದ ಕೊಡಿಂದ, ಬಾಬಣ್ಣನ ಹಿಂದೆಂದ, ದೊಡ್ಡ ಮರದ ಗಂಡಿಲಿ ಕುದ್ದ ಹೈದಂಗ ಎಲ್ಲವೂ ನೋಡಿಕಂಡೇ ಇದ್ದೊ. ಗುಂಡ್‌ನ ಮೇಲೆ ಗುಂಡ್ ಬೀಳಿಕಾಕನ ಅಪ್ಪಯ್ಯಜ್ಜನೂ ನಿತ್ತಲ್ಲಿಂದ ಹತ್ತಾರ್ ಮಾರ್ ಕೆಳಗಿಳ್‌ದ್ದಿದ್ದೊ... ಅಂತಾ ಪೆಟ್ಟ್‌ನ ತೆಕಂಡ ಕಾಟಿ ನಿತ್ತ್‌ಕಂಡೇ ಇತ್ತ್. ಆದರೆ ಬಾಬಣ್ಣಣ್ಣಂಗೆ ಇದ್ಯಾವುದೂ ಗೊತ್ತಿತ್ತೋ ಇಲ್ಲೆನೋ. ಅವು ಯಾವುದೋ ಮಾಂತ್ರಿಕತೆಗೆ ಒಳಗಾದವರಂಗೆ ಇದ್ದೊ. ಕೈ ಬೆರಳ್‌ಲಿ ಹಿಸಿದ ತೋಟೆಗಳ ತುಂಬ್ಸಿ ಒಮ್ಮೆಗೇ ಮತ್ತೆರ್ಡ್ ಗುಂಡ್ ಹೊಡ್ದೊ. ಕಾಟಿ ಈಗ ಸಂಪೂರ್ಣ ನಡ್ಗಿಕಂಡ್ ಇತ್ತ್. ಇಲ್ಲೆ ಯಾಕೋ ಗೊತ್ಲೆ. ಬಾಬಣ್ಣಣ್ಣ ಜೋಬ್‌ಂದ ಮತ್ತೆರ್ಡ್ ತೋಟೆ ತುಂಬ್ಸಿ ಮತ್ತೆ ಗುಂಡ್ ಹೊಡ್ದೊ. ಇಡೀ ಪೂಮಲೆ ಕಾಡ್‌ಗೆ ಕಾಡೇ ನಡ್ಗಿ ಹೋಗಿತ್ತ್. ಎರ್ಡ್ ಮುಂದೆನ ಕಾಲ್‌ನ ನೆಲಕ್ಕೆ ಹಿಸಿ ಒಂದ್ ಇಡೀ ಗುಡ್ಡೆ ಜರ್ದಾಂಗೆ ಕಾಟಿ ನೆಲಕ್ಕೆ ಬೀತ್. ಎಂತಾ ಕಾಕತಾಳಿಯನೋ...ಎಂತಾ ಆಶೀರ್ವಾದನೋ....ಗೊತ್ಲೆ... ಪಂಡ್ ಬೋಜಪ್ಪ ಕಳ್ಗಿಲಿ ಹುಲಿ ಹೊಡ್ದ ಎರ್ಡ್ ಗುಂಡ್‌ನ ಆಕಾಶಕ್ಕೆ ಹೊಡ್ದಿದ್ದೊ. ಆರ್ ಗುಂಡ್‌ಗಳ ಕಾಟಿಗೆ ಹೊಡ್ದ ಬಾಬಣ್ಣ ಏಳನೇ ಗುಂಡ್‌ನ ಆಕಾಶಕ್ಕೆ ಹೊಡ್ತ್. ಎಂತಾ ವಿಚಿತ್ರ. ಅಂದುನೂ ಆ ಸಮಯಕ್ಕೆ ಕುಡೆಕಲ್ಲ್‌ಲಿ ಸಂಕ್ರಮಣ ನಡ್ಯತಿತ್ತ್. ಪೂಜಾರಿಗೆ ಕಂಡೂ ಕಾಣದ ದರ್ಶನ ಇತ್ತ್. ಅಷ್ಟೊತ್ತಿಗೆ ಕೆಳಗಿಳ್ದ್ ಬಂದಿದ್ದ ಅಪ್ಪಯ್ಯಜ್ಜ. "ಸಾಕಣ್ಣ ನಿಲ್ಸ್‌ಂತ ಹೇಳ್ದೊ..." ಆಗಳೇ ಬಾಬಣ್ಣಣ್ಣಂಗೆ ಇಹದ ಜ್ಞಾನ ಬಂದದ್. ಗುರಿಗೆ ಗುಂಡ್ ಹೊಡ್ದ್ ರಾಜ್ಯಕ್ಕೇ ಸುರೂನವಾಗಿ ಬಂದ ಎನ್‌ಸಿಸಿ ಕೆಡೆಟ್ ದೊಡ್ಡ ಅಂತಾ ಬೆಡಿನ ದರ್ಪನ ಕಂಡ್ ಧಿಗ್ಮೂಡ ಆಗಿ ಹೋಗಿತ್ತ್. ಜೀವನಲಿ ಒಂದ್ ಅದ್ಭುತ ಬೇಟೆನ ಕಣ್ಣಾರೆ ಕಂಡಿತ್ತ್. ಕಾಟಿ ಏನೋ ಬಿದ್ದಿತ್ತ್. ಅದರ ದೇಹನ ಅಲ್ಲಿಯೇ ಉಳ್ಸವಾಂಗೆ ಇತ್ಲೆ. ಈ ಬೇಟೆಗೆ ಸೇರ್ದವು ಯಾರೂ ಒಂದೆರಡು ಜನರ ಬುಟ್ಟರೆ ಬೇರೆ ಯಾರೂ ಕಾಟಿನ ತಿಂಬತಿತ್ಲೆ. ಹೇಂಗೋ ಏನೋ ಅದರ ತಿಂಬಷ್ಟ್ ಜನಂಗಳ ಕರ್ಕಂಡ್ ಬಂದ್ ಅದರ ಕಾಲಿ ಮಾಡ್ಸಿದೋ. ಯಾರೋ ಹೊಡ್ದ ದೊಡ್ಡ ಕೆಂಪ ಒಂದ್ ಸಿಕ್ಕಿತ್ತ್. ಈ ರಗಳೆಲಿ ಅದರ ಪಾಲ್ ಹಾಕಿತ್ಲೆ. ಹಾಕಿಕೆ ಆಗದಿರುವುಷ್ಟ್ ಜನಂಗ ಬೇಟೆಲಿ ಇದ್ದೋ... ಹೊಡ್ದವಂಗೇ ಅದರ ಬುಟ್ಟೊ. ಅಂವ ಅದರ ಒಂದ್ ಪಾಲ್ ತೆಕಂಡ್ ಪೂರಾ ಬಾಬಣ್ಣಂಗೇ ಬುಟ್ಟತ್ತ್.

ಮನೆ ಸೇರಿಕಾಕನ ಮಧ್ಯ ರಾತ್ರಿ ಕಳ್ದಿತ್ತ್. ಬೊಂಬ ಹೈದ ದೊಡ್ಡ ಗೋಣಿನ

ಹೊರೆ ಆಗಿ ಕಾಟಿನ ತಲೆನ ಹೊತ್ತ್ ತಂದಿತ್ತ್. ಕುತ್ತಿಗೆಂದ ಮೇಲೆ ಇಡೀ ಒಣ್ಗ್‌ಸೊಕೂಂತ ಬಾಬಣ್ಣನವುಕೆ ಆಸೆ ಇತ್ತ್. ಅಟ್ಟಳಿಕೆ ಒಂದರ ಮಾಡಿ ಕೆಳಗೆಂದ ದೊಡ್ಡ ಕುಂಟೆಗಳ ಹಿಸಿ ಕಿಚ್ಚಿಹಾಕಿ ಅದರ ಒಣ್ಗ್‌ಸಿಕೆ ನೋಡ್ದೋ. ಅದರ್ಲಿ ಇದ್ದ ಚೆರ್ಬಿನೋ ಏನೋ ಅದ್ ಒಣ್ಗುವ ಸ್ಥಿತಿಲೇ ಇತ್ಲೆ. ಹೀಂಗೇ ಒಂದೆರ್ಡ್ ದಿನ ಕಳ್ದಾಕನ ಇದ್ ಹೀಂಗೇ ಒಣ್ಗಿಕಿಲೇಂತ ಕಂಡತ್. ಕಡೆಗೆ ಅದರ ಕೊಂಬ್ ಸಮೇತ ತೆಕಂಡ್ ಹೋಗಿ ಕಂಪಲಿ ಹುಗ್ದ್ ಹಿಸಿದೋ, ಎಲ್ಲಾ ಕರ್ಗಿ ಹೋದ ಮೇಲೆ ಕೊಂಬ್‌ನ ತೆಗಿಯಕ್‌ಂತ. ಬೇಟೆಲಿದ್ದವು ಎಲ್ಲವೂ ನೋಡ್ದಾಂಗೆ ಅದ್ ಭಾರಿ ದೊಡ್ಡ ಕಾಟಿ ಆಗಿದ್ದರೂ ಅದರ ಕೊಂಬ್ ಅಷ್ಟ್ ದೊಡ್ಡದಿತ್ಲೆ. ಆದರೂ ಅದ್ ಬಾಬಣ್ಣಣ್ಣನ ಹೆಮ್ಮೆನ ಪ್ರತೀಕ ಆಗಿತ್ತ್. ಅದ್ ಇಂದೂ ಅವರ ಮನೆಲಿ ಅವರ ಆ ಬೇಟೆನ ನೆನ್ಪು ತಂದದೆ. ಅಂದ್‌ನ ದಿನಂದ ಮೇಲೆ ಬೆಡಿ ಉಜ್ಜುದು. ತೋಟೆನ ಬಿಸ್‌ಲ್‌ಗೆ ಹಿಸುದು, ಇದೆಲ್ಲ ಕೆಲ್ಸ ಕುಞ್ಞಣ್ಣಂಗೆ ಬಂದಿತ್ತ್. ಒಂದ್ ದಿನ ಪೊಪ್ಪ ಇಲ್ಲದ ಸಮಯಲಿ ಎರ್ಡ್ ನಾಲ್ಕನೇ ನಂಬರ್ ಚಿಲ್ಲ್‌ನ ತೋಟೆನೂ ಸಹಿತ ಬೆಡಿ ಹಿಡ್ಕಂಡ್ ತೋಟ ದಾಟಿ ಗದ್ದೆ ಕರೆಗೆ ಹೋತ್. ಗದ್ದೆ ಕೊಡೀಲಿ ಎರ್ಡ್ ಮುಂಗುಲಿಗ ಅತ್ತಿತ್ತ್ ಓಡಾಡಿಕಂಡ್ ಇದ್ದೊ. ಅದರ್ಲಿ ಒಂದಕ್ಕೆ ಬೆಡಿನ ಒಂಬ್ಸಿ ಅಂವ ಗುಂಡ್ ಹೊಡ್ತ್. ಮುಂಗುಲಿ ಅಲ್ಲೇ ಸತ್ತ್ ಬಿದ್ದಿತ್ತ್. ಅವನ ಗುಂಡ್‌ನ ಶಬ್ದಕ್ಕೆ ಗದ್ದೆಲಿ ಕುದ್ದ್‌ಕಂಡಿದ್ದ ಚೋರೆ ಹಕ್ಕಿಗ ಹಾರಿ ಚಾಳೆಲಿ ಕುದ್ದಿದ್ದೊ. ಬೆಡಿಲಿ ಇನ್ನೂ ಒಂದ್ ತೋಟೆ ಬಾಕಿ ಇತ್ತ್. ಚಾಳೆ ಬುಡಲಿ ನಿತ್ತ್ ಚಾಳೆ ಮಡ್ಲ್‌ಲಿ ಕುದ್ದಿದ್ದ ಚೋರೆಗಳಿಗೆ ಕುತ್ತ ಗುರಿ ಹಿಸಿ ಗುಂಡ್ ಹೊಡ್ತ್. ಅವಂಗೆ ಬೆಡಿ ಮೆಟ್ಟುದು ಹೇಂಗೇಂತ ಗೊತ್ತಿತ್ಲೆ. ಅದ್ ಇಂದ್ ಅವಂಗೆ ಮೆಟ್ಟಿತ್ತ್. ಮಡ್ಲ್‌ಲಿ ಕುದ್ದ್‌ಕಂಡಿದ್ದ ಚೋರೆಗ ಎರ್ಡೂ ಕೆಳಗೆ ಬಿದ್ದಿದ್ದೋ. ಚಾಳೆ ಗುಂಡಿ ಕರೇಲಿ ನಿತ್ತಿದ್ದ ಕುಞ್ಞಣ್ಣ ಬೆಡಿ ಮೆಟ್ಟಿದ ಪೆಟ್ಟ್‌ಲಿ ಚಾಳೆ ಗುಂಡಿಗೆ ಬಿದ್ದಿತ್ತ್. ಅಲ್ಲಿಂದ ಸುರಾಗಿತ್ತ್ ಅವನ ಬೇಟೆ ಹುಚ್ಚ್. ಕ್ಲಾಸ್ ಎಂಟೇ ಆದರೂ ಕುಞ್ಞಣ್ಣಂಗೆ ಕಾರ್ಬಾರ್ ದೊಡ್ಡದಿತ್ತ್. ದಿನಾ ಕೈಲಿನೇ ಹಿಸಿಕಂಡಿರಿಕೆ ಒಂದ್ ಸಣ್ಣ ಪಿಸ್ತೂಲ್ ಇದ್ದರೆ ಒಳ್ಳದೂಂತ ಕಂಡಿತ್ತ್. ಆದರೆ ಹೇಂಗೆ ಸಂಪಾದನೆ ಮಾಡ್ದು ಗೊತ್ತಿಲ್ಲೆ. ಅವಂಗೆ ಅವನಂತವನೇ ಒಬ್ಬ ಫ್ರೆಂಡ್ ಇತ್ತ್. ಅವನ ಯೋಚನೆನೂ ಹಾಂಗೇ ಇತ್ತ್. ಕಡೆಗೆ ಇಬ್ಬರೂ ಸೇರಿ ಪಿಸ್ತೂಲ್ ಮಾಡ್ದೂಂತ ತೀರ್ಮಾನ ಮಾಡ್ದೊ. ದೀಪಾವಳಿ ಸಮಯಲಿ ಪಟಾಕಿ ಹಿಸಿ ಹೊಡಿವ ಪಿಸ್ತೂಲ್‌ಗೆ ಕೊಳವೆ ಜೋಡ್ಸಿ ಕೇಪುನ ಬೆಡಿ ತುಂಬ್ಸಿದಾಂಗೆ ತುಂಬ್ಸಿ ಹೊಡ್ದರೆ ಹೇಂಗೆಂತ ಕಂಡತ್. ಮತ್ತೆ ಹೆಚ್ಚ್ ಯೋಚನೆ ಮಾಡಿಕೆ ಏನೂ ಇತ್ಲೆ. ಅಂಗ್ಡಿಗೆ ಹೋಗಿ ಅಂತದರ ತಂದ್ ಅದರ ಕೊಳವೆನ ತೆಗ್ದ್ ಕೊಡೆಕಾಲನ ಸುಮಾರ್ ಆರ್ ಇಂಚ್‌ನಷ್ಟ್ ತುಂಡ್ ಮಾಡಿ ಅದರ ಒಂದ್

ಪುಡೆ ಒಟ್ಟೆನ ಆಚಾರಿನಲ್ಲಿ ಹೋಗಿ ಮುಚ್ಚ್‌ಸಿ ಅದರ ನಡೂಲಿ ಒಂದ್ ಸಣ್ಣ ಒಟ್ಟೆ ಮಾಡಿ ಆಟದ ಪಿಸ್ತೂಲ್‌ಗೆ ಸರಿ ಆವಾಂಗೆ ಆಚಾರಿನೊಟ್ಟಿಗೆ ಬೆಸಿಗೆ ಹಾಕಿ ತೆಕಂಡ್ ಬಂದೊ. ಮಾಡಿಕೊಟ್ಟ ಆಚಾರಿ ಸಾಮಾನ್ಯದವ ಅಲ್ಲ. ಅಂವ ಈ ಮಕ್ಕಳಿಗೆ ಅದರ ಹೇಂಗೆ ಮಾಡಿಕೊಟ್ಟತೋ. ಇಂದ್ ನೆನ್ಸಿರೆ ಆಶ್ಚರ್ಯ ಆದೆ. ಅವನೂ ಈ ಉರಿಕೊಳ್ಳಿಗಳ ಮಾತ್‌ಗೆ ಮರಳಾಗಿತ್ತೋ ಏನೋ. ಅಂತೂ ಇಂತೂ ಪಿಸ್ತೂಲ್ ಆಗಿತ್ತ್. ಇನ್ನ್ ಇದರ ಪ್ರಯೋಗ ಮಾಡ್ದು ಮಾತ್ರ ಇದ್ದದ್. ಸೀದಾ ಅಪ್ಪಣ್ಣಜ್ಜನ ಅಂಗ್ಡಿಗೆ ಹೋಗಿ ಬೆಡಿಮೊದ್ದ್, ಚಿಲ್ಲ ತೆಕಂಡ್ ಬಂದೋ. ಅವರ ಕೇಪು ಪಟಾಕಿ ಕೇಪುನೇ. ಬೆಡಿ ತುಂಬ್ಸಿ ಯಾರೂ ಇರದ ಜಾಗೆಗೆ ಹೋಗಿ ಸುಮಾರ್ ಹದ್ನೈದ್ ಅಡಿ ದೂರಂದ ಗುರಿಹಿಸಿ ಬೀಜದ ಮರಕ್ಕೆ ಹೊಡ್ದೊ. ಅವು ಇಬ್ಬರೂ ಒಬ್ಬೊಬ್ಬಂಗೆ ಒಂದೊಂದರಾಂಗೆ ಮಾಡಿಕಂಡಿದ್ದೊ. ಪ್ರಾಯೋಗಿಕ ಗುಂಡ್ ಎರ್ಡ್ ಬೆಡಿಂದಳೂ ಸರಿಯಾಗಿನೇ ಹೊರ್ಟಿತ್ತ್. ಈಗ ಅವ್ ಬೆಡಿನ ದನಿಗ ಆಗಿದ್ದೊ. ಪಿಸ್ತೂಲ್‌ಂತ ಆದ ಮೇಲೆ ಅದರ ಅಲ್ಲಿ ಇಲ್ಲಿ ಹಿಸುದು ಸರಿ ಅಲ್ಲ. ಅದರ ಸೊಂಟಕ್ಕೇ ಸಿಕ್ಸಿಕಂಡಿರ್ದು ಸರಿಯಾದ ಕ್ರಮಾಂತ ಅವ್ಕೆ ಗೊತ್ತಿತ್ತ್. ಅಂದ್‌ಂದ ಮೇಲೆ ಅದರ ಸೊಂಟಕ್ಕೆ ಸಿಕ್ಕಿಸಿಕಂಡೇ ಶಾಲೆಗೆನೂ ಬರ್ತಿದ್ದೊ. ಯಾವುದೇ ಒಂದ್ ವಸ್ತುಗೆ ಬೆಲೆಬಾದು ಅದರ ಬಗ್ಗೆ ಎಲ್ಲವ್ಕೆನೂ ಗೊತ್ತಾದರೆ ಮಾತ್ರ.

ಅಂತದ್ ಇರಿಕಾಕ ಯಾರಕ್ಕಲಾರ್ ಹೇಳದಿದ್ದರೆ ಹೇಂಗೆ. ಹಾಂಗೇನೇ ಅವನ ಹಕ್ಕಲೆನ ಪ್ರೆಂಡ್ಸ್‌ಗಳಿಗೆ ಅದರ ಹೇಳ್ತ್. ಅವ್ಕೆನೂ ಅದರ ಹೇಂಗೆ ಹೊಡಿದೂಂತ ನೋಡಿಕೆ ಆಸೆ ಇತ್ತ್. ಅದೇ ರೀತಿ ಒಂದ್‌ದಿನ ಮಧ್ಯಾಹ್ನ ಶಾಲೆ ಬುಟ್ಟ ಕೂಡ್ಲೆ ಕಾಂತಮಂಗಲ ಹಳ್ಳದ ಕರೆಗೆ ನಾಲ್ಕೈದ್ ಜನ ಹೈದಂಗಳ ಕರ್ಕಂಡ್ ಹೋತ್. ಹಳ್ಳದಕ್ಕಲೆನೇ ಯಾಕೆ ಹೋದ್‌ಂತ ಹೇಳ್ರೆ, ಅವಂಗೆ ಅವನ ಪಿಸ್ತೂಲ್ ಹೊಡ್ದದೇಂತ ಮಾತ್ರ ಗೊತ್ತಿತ್ತ್. ಆದರೆ ಚಿಲ್ಲ್ ಎಷ್ಟ್ ದೂರ ಹೋದೇಂತ ಗೊತ್ತಿತ್ತ್‌ಲೆ. ಅದರ ಪರೀಕ್ಷೆ ಮಾಡ್ದು ಹೇಂಗೇಂತ ಹೇಳ್ರೆ. ಹಳ್ಳದ ಉದ್ದಕ್ಕೆ ಗುಂಡ್ ಹೊಡ್ದರೆ ಚಿಲ್ಲ್ ಹಳ್ಳದ ನೀರ್‌ಲಿ ಬೀಳ್ದು ಕಂಡದೆಲೆ. ಆಗ ಅದ್ ಎಷ್ಟ್ ದೂರಕ್ಕೆ ಬೀಳ್ದುಂತ ಗೊತ್ತಾದೆಂತ ನೆನ್ಸಿಕಂಡಿತ್ತ್. ಅದನ್ನೂ ನೋಡ್ದಾಂಗೆ, ಅದರ ಹೈದಂಗಳಿಗೆ ತೋರ್ಸಿದಾಂಗೂ ಆದೇಂತ ಅಂವ ಅವರ ಕರ್ಕಂಡ್ ಅಲ್ಲಿಗೆ ಹೋದ್ದ್. ಚಿಲ್ಲ್‌ಗ ಸುಮಾರ್ ನೂರಡಿ ಮೀರಿ ದಾಟಿ ಹಳ್ಳಕೆ ಬಿದ್ದಿತ್ತ್. ಅವನ ಪಿಸ್ತೂಲ್‌ನ ಸಾಮರ್ಥ್ಯಕ್ಕೆ ಅವಂಗೇ ಕುಶಿ ಆಗಿತ್ತ್. ಅಂದ್ ಅವನೊಟ್ಟಿಗೆ ಬಂದದರ್ಲಿ ನೆಡ್ಚಿಲ್ ಬಟ್ರ ಮಂಜನೂ ಒಬ್ಬ. ಯಾರಿಗೆಲ್ಲಾ ಹೇಂಗೆಲ್ಲಾ ಕಂಡತೋ ಗೊತ್ಲೆ. ಆದರೆ ಅವಂಗೆ ಮನ್ಸ್‌ಗೆ ಕಂಡದ್ ಮಾತ್ರ ಬೇರೆನೇ. ಅವನ ಮನೆಲಿ ಅವನ ಅಪ್ಪನ ಹಕ್ಕಲೆ ರಿವಾಲ್ವರ್ ಇತ್ತ್. ಅದರ ಕಂಡಿತ್ತೇ ಹೊರ್ತು ಮುಟ್ಟಿ ನೋಡಿಕೂ ಅವು

ಅವನ ಬುಡ್ತಿತ್ಲೆ. ಹಾಂಗಾಗಿ ಇದರ ನೋಡಿಕಾಕನ ಅವನ ಅಪ್ಪನ ಪಿಸ್ತೂಲ್‌ಂದ ಇದ್ ಯಾವ ರೀತೀನೂ ಕಡಿಮೇಂತ ಕಂಡತ್ಲೆ. ಆ ಕೂಡ್ಲೇ ತೀರ್ಮಾನ ಮಾಡಿತ್ತ್. ನಂಗೂ ಇಂತದೇ ಒಂದ್ ಪಿಸ್ತೂಲ್ ಬೇಕೂಂತ. ಈ ಪಿಸ್ತೂಲ್ ಸಂಗತಿಗ ಒಬ್ಬನ ಬಾಯಿಂದ ಇನ್ನೊಬ್ಬನ ಕೆಬಿಗೆ ಮುಟ್ಟಿ ಮುಟ್ಟಿ ಸುಮಾರ್ ಹೈದಂಗಳಿಗೆ ಈ ಪಿಸ್ತೂಲ್ ಗೊತ್ತಾಗಿತ್ತ್. ಅಲ್ಲದೇ ಒಬ್ಬ ಮಾಸ್ತ್ರ ಕೆಬಿಗೂ ಸುದ್ದಿ ಮುಟ್ಟಿತ್ತ್. ಒಬ್ಬ ಎಂಟನೇ ಕ್ಲಾಸ್‌ನ ಹೈದ ಪಿಸ್ತೂಲ್ ಹಿಡ್ಕಂಡೇ ಶಾಲೆಗೆ ಬಂದದೇಂತ ಹೇಳ್ರೆ ಅವು ನಂಬಿತ್ಲೆ. ಅಂದರೂ ಕ್ಲಾಸ್‌ರೂಂಗೆ ಬಂದ್ ಅವನ ವಿಚಾರಣೆ ಮಾಡ್ದೊ. ಅಂದ್ ಅವನ ಕೈಲಿ ಆದಿತ್ಲೆ. ಅಂದ್‌ನ ದಿನ ಅವ ಬಚಾವಾತ್. ಪಾಪ ಮಾಸ್ತ್ರ ಅಂವ ಹೇಳ್ದರ ನಂಬಿದೊ. ಆದರೆ ಮೊರ್ದಿನ ಅವಂಗೆ ಅವನ ಮನೇಲಿ ಸಮ್ಮಾನ ಕಾದ್‌ಕಂಡಿತ್ತ್.

ಸುಳ್ಯಲಿ ಬಿಡಾರಲಿ ಇದ್ದ್ ಶಾಲೆಗೆ ಹೋಗ್ತಿದ್ದ ಕುಞ್ಞಣ್ಣ ಅಂದ್ ಶನಿವಾರ ಶಾಲೆ ಮುಗ್ದಾಂಗೆ ತಮ್ಮನೊಟ್ಟಿಗೆ ಬಡ್ಡಡ್ಕಕ್ಕೆ ಬಂದಿತ್ತ್. ಅವನ ತಲೆಲಿ ರಜೆದಿನ ಅವಂದೇ ಬೆಡಿಲಿ ಹಕ್ಕಿಹೊಡಿವ ಯೋಜನೆ ಇತ್ತ್. ಮೊರ್ದಿನ ಐತ್ವಾರ. ಬೊಳ್ಪುಗೆ ಬೇಗನೇ ಎದ್ದತ್. ಮನೆ ಮಾಳಿಗೆಲಿ ಪಿಸ್ತೂಲ್ ತುಂಬ್ಸಿತ್. ಈಡ್ ಸೊಲ್ಪ ದೊಡ್ಡದೇ ಇತ್ತ್. ಅಷ್ಟೊತ್ತಿಗೆ ಅಮ್ಮ ಕೊಟ್ಟ ಕಾಪಿನ ಬೇಗ ಬೇಗ ಕುಡ್ಕಂಡ್ ಇನ್ನೇನ್ ಮನೆ ಬುಟ್ಟ್ ತೋಟಕ್ಕೆ ಇಳ್ಯೊಕು... ಅಷ್ಟೊತ್ತಿಗೆ ನಾಯಿಗೆ ಬೊಗಳ್ದೊ. ಯಾರೋ ಬಂದಿರೊಕೂಂತ ನೋಡ್ರೆ ನೆಡ್ಚಿಲ್ ಭಟ್ರ್. ಊರ್‌ಲಿ ದೊಡ್ಡ ಮೊಯ್ಸ. ಯಾಕಪ್ಪಾ ಇಷ್ಟ್ ಬೊಳ್ಪ್‌ಗೆ ಬಂದೋಂತ ಆತ್. ಏನೋ ಅಪ್ಪನೊಟ್ಟಿಗೆನೊ ಅಜ್ಜನೊಟ್ಟಿಗೆನೋ ಮಾತಾಡಿಕೆ ಇರೊಕೂಂತ ನೆನ್ಸಿತ್. ನಾಯಿಗಳ ಓಡ್ಸಿ ಬನ್ನೀಂತ ಅವರ ಕರ್ಣ. "ತಂದೆಯವ್ರು ಇದ್ದಾರೆಯೋ ಅಣ್ಣಾ" ಕೇಳಿಕಂಡೇ ಅವು ಮನೆ ಹತ್ತಿದೋ. ತುಂಬಾ ಸಜ್ಜನ, ಮಕ್ಕಳನೂ ಮರ್ಯಾದಿಲೇ ಮಾತಾಡ್ಸವು. ಅಷ್ಟೊತ್ತಿಗೆ ಆಚೆ ಎಲ್ಲೋ ಇದ್ದ ಬಾಬಣ್ಣಣ್ಣ ಬಂದವೇ ಬನ್ನಿಸ್ವಾಮಿ, ಕೂತ್ಕೊಳ್ಳಿಂತ ಹೇಳ್ದೊ. ಇನ್ನ ನನ್ನ ಕೆಲ್ಸ ಮುಗ್ತ್‌ಂತ ಕುಞಣ್ಣ ಅಲ್ಲಿಂದ ಜಾಗೆ ಕಾಲಿ ಮಾಡ್ತ್. ಅಪ್ಪ ಬಟ್ರೊಟ್ಟಿಗೆ ಮಾತಾಡ್ದು ಅವಂಗೆ ಕೇಳಿಕಂಡಿತ್ತ್. ಏನ್ ಸ್ವಾಮಿ ಇಷ್ಟ್ ಬೇಗ? ಅಪ್ಪ ಕೇಳಿಕಂಡಿದ್ದೊ. ಅದ್ಕೆ ಬಟ್ರ ಉತ್ತರ ಕೇಳಿ ಒಮ್ಮೆ ಇಡೀ ನಡ್ಗಿ ಹೋತ್ ಕುಞ್ಞಣ್ಣ. ಬಟ್ರ್ ಹೇಳ್ತಿದ್ದೊ. ನನಗೆ ನಿಮ್ಮ ಮಗನ ಹತ್ತಿರ ಸ್ವಲ್ಪ ಮಾತಾಡ್ಲಿಕೆ ಇತ್ತೂಂತ. ಪ್ರತೀವಾರ ಮನೆಗೆ ಬಂದಾಕನನೂ ಅವಂದ ಮುಂದೇ ಅವನ ಬಗ್ಗೆ ಮನೆಗೆ ಒಂದೆರಡು ದೂರ್ ಬಂದಿದ್ದದೆ. ಆದರೆ ಈ ಶನಿವಾರ ಬಾಕನ ಅಂತದೆಂತದೂ ಕಂಡತ್ಲೆ. ಹಾಂಗಿರಿಕಾಕನ ಇದೆಂತದಪ್ಪ ಹೊಸ್ತ್. ಒಳ್ಳೆಸುದ್ದಿ ಅಂತೂ ಅವನ ಬಗ್ಗೆ ಇಲ್ಲಿವರೆಗೆ ಹೇಳ್ದವೇ ಇತ್ಲೆ. ಬೇಗ ಅಲ್ಲಿಂದಜಾಗೆ

ಕಾಲಿಮಾಡೊಕೂಂತ ಅಲ್ಲಿಂದ ಹೊರ್ಡಿಕೆ ನೋಡ್ತ್. ಅಷ್ಟರ್ಲಿ ಅಪ್ಪ ಕರ್ದಿದ್ದೋ. ಕುಞ್ಞಣ್ಣಾ ಅಪ್ಪ ಜೋರ್‌ಲೇ ಕರ್‍ದೊ. ಅವ್ಕೂ ಗೊತ್ತಿತ್ತ್. ಮಂಜ ಎಂತದೋ ಒಂದ್ ಅನರ್ಥ ಮಾಡಿಟೂಂತ. ಇಲ್ಲೆ ಇನ್ನ್ ಇಲ್ಲಿಂದ ಹೋಕೆ ಆದುಲೇಂತ ಅವಂಗೆ ಗೊತ್ತಾತ್. ಯಾರೋ ದಾರಿಲಿ ಹೋಂವ, ಕಾಲಿ ಪೋಲಿ ಏನಾರ್ ದೂರ್ ತಂದಿದ್ದರೆ ಕುಞ್ಞಣ್ಣನ ರೀತಿನೇ ಬೇರೆ ಇರ್ತಿತ್ತೊ ಏನೋ. ಆದರೆ ಇಂದ್ ದೂರ್ ತಂದವು ಊರ್‌ಲೇ ದೊಡ್ಡವು. ಅವು ಸಾಮಾನ್ಯ ಅಲ್ಲ. ಸುಮ್ಮನೆ ಬಾಕೆನೂ ಇಲ್ಲೆ. ಅಂತವು ಬಂದ್ ಮನೆಲಿ ಕುದ್ದು ಮಾತಾಡೊಕೂಂತ ಹೇಳಿಕಾಕನ ಅಪ್ಪ ಕರ್ದಿದ್ದೊ. ಒಂದುನೂ ತಲೆಬುಡ ಗೊತ್ತಾತ್ಲೆ. ಎಂತದಾರ್ ಆಗಿರ್‍ಲಿ. ದೇವ್ರು ಹಿಸಿದಾಂಗೆ ಆದೇಂತ ಅಂವ ಕರ್ದಲ್ಲಿಗೆ ಬಾತ್. ಬಟ್ರ್ ಅವನ ಹಕ್ಕಲೆ ಕೇಳ್ದೋ..."ಅಣ್ಣ ನಿಮ್ಮ ಹತ್ತಿರ ಒಂದು ಪಿಸ್ತೂಲ್ ಉಂಟಂತೆ. ನಮ್ಮ ಬದ್ರಂಗೂ ಅಂತದೇ ಒಂದು ಬೇಕೂಂತ ಕೇಳಿದ. ಅದು ಹೇಗೆ ಉಂಟೂ, ಎಲ್ಲಿ ಸಿಕ್ತದೇಂತ ಕೇಳಿಕೊಂಡು ಹೋಗುವಾಂತ ಬಂದೆ" ಒಮ್ಮನೇ ಸಿಡ್ಲ್ ಬೊಡ್ದಾಂಗೆ ಆಗಿತ್ತ್ ಕುಞ್ಞಣ್ಣಂಗೆ. ಇನ್ನ್ ಇಲ್ಲಿಂದ ಹೋಕೆ ಆಕಿಲೆ. ಮಾಸ್ತ್ರ ಒಟ್ಟಿಗೆ ಹೇಳ್ದಾಂಗೆ ಇದ್ ಅಲ್ಲ. ಅವಂಗೆ ಗೊತ್ತಾಗಿತ್ತ್ ಇನ್ನ್ ಸುಳ್ಳ್ ಇಲ್ಲಿ ನಡಿದುಲೇಂತ. ಈಗ ಭಟ್ರಂದ ಮತ್ತೆ ಪ್ರಶ್ನೆ ಬಾತ್. "ಉಂಟೋ ಅಣ್ಣ ನಿಮ್ಮಲ್ಲಿ. ಒಮ್ಮೆ ನೋಡ್ವನಾ ಹೇಗೆ" ಬೆಣ್ಣೆ ಮೇಲೆ ಕೂದಲೆಳ್ದಂಗೆ ಬಟ್ರ್ ಇಡೀ ವಿಷಯನೇ ಬಿಚ್ಚಿ ಹಾಕಿದ್ದೊ. "ಹೌದೊಯಾ ನಿನ್ನಕ್ಕಲೆ ಪಿಸ್ತೂಲ್ ಉಟ್ಟೊ...?" ಅಪ್ಪನ ಪ್ರಶ್ನೆಗೆ, ಬಟ್ರ್‌ಕಾದ್‌ಕಂಡ್ ಇದ್ದ ಪ್ರಶ್ನೆಗೆ ಉತ್ತರ ಒಂದೇ ಇತ್ತ್. "ಹೌದು ಉಟ್ಟು." ಒಂದ್ ಕ್ಷಣ ಎಂತೆಂತಾ ಬೆಡಿಲಿ ಹೊಡ್ದ ಬಾಬಣ್ಣ ಗೌಡ್ರ್ ದಿನಾ ಸೊಂಟಲಿ ರಿವಾಲ್ವರ್ ಹಿಸಿ ತಿರ್ಗಾಡುವ ನಡ್ಚಿಲ್ ಬಟ್ರ್ ಇಬ್ಬರೂ ಒಮ್ಮೆಲೇ ದಂಗಾಗಿ ಹೋಗಿದ್ದೋ. ಒಬ್ಬ ಸಣ್ಣ ಪ್ರಾಯದ ಇನ್ನೂ ಎಂಟ್ನೆ ಕ್ಲಾಸ್‌ಲಿ ಓದ್‌ತಿರ್ವ ಹೈದನ ಕೈಲಿ ಅಂತದಿರಿಕಿಲೇಂತ ಅವು ಆ ಕ್ಷಣದ ಒರೆಗೂ ನಂಬಿದ್ದೊ. ಆದರೆ ಕುಞ್ಞಣ್ಣ ಯಾವುದೇ ಹೆರ್ದಿಕೆ ಇಲ್ಲದೇ ಹೇಳಿತ್ತ್. ಹೌದು ಅಂತದ್ ನನ್ನ ಹಕ್ಕಲೆ ಉಟ್ಟೂಂತ, ಭಟ್ರ್ ಹೆದ್ರಿ ಹೋಗಿದ್ದೋ.. ಇಂಥದೂ ಉಟ್ಟೋಂತ. ಬಾಬಣ್ಣಣ್ಣ ನಡ್ಗಿ ಹೋಗಿದ್ದೊ ಈ ಮಂಜನ ಹೇಂಗೆ ಉದ್ದಾರ ಮಾಡ್ತೂಂತ. ಕೆಲಕ್ಷಣಗ ಹಾಂಗೇ ಮೌನ ತುಂಬಿತ್ತ್. ಮೌನ ಮುರ್ದ್ ಬಾಬಣ್ಣ ಕೇಳ್ದೊ"ಎಲ್ಲಿಟ್ಟುಯಾ ನಿನ್ನ ಬೆಡಿ" ತೆಕ್ಕಂಡ್ ಬಾ ನೋಡವೋಂತ. ಒಂದ್ ಕನಸ್‌ನ ಮಹಾ ಸಾಮ್ರಾಜ್ಯನೇ ಮುಳ್ಗಿ ಹೋದಾಂಗೆ ಆಗಿತ್ತ್. ಅದ್ ಸೊಂಟಲೇ ಸೆಕ್ಕಿಸಿಕಂಡ್ ಇದ್ದರೂ ಒಳಗೆ ಹೋಗಿ ತಂದಾಂಗೆ ಮಾಡ್ತ್. ಒಳಗೆ ಅಸಮಧಾನ ಕೊದ್‌ಕಂಡ್ ಇತ್ತ್. ಅದ್ಕೆ ತುಪ್ಪ ಹೊಯ್ದಾಂಗೆ ಬಟ್ರ್ ಕೇಳ್ದೊ. "ಇದು ಹೊಡಿಲಿಕ್ಕೆ ಆಗ್ತದೋ? ಹೊಡ್ದು ತೋರ್ಸಿ ಅಣ್ಣಾಂತ" ಮತ್ತೆ ಬೇರೇನೂ

ಮಾಡಿಕೆ ಆತ್ಲೆ. ಅಂವ ಅವರೆರ್ದ್ ಮನೆ ಹಿಂದೆನ ಬರೆಗೆ ಗುಂಡ್ ಹೊಡ್ತ್. ಕೆಲವು ಸರ್ತಿ ಎರ್ಡ್ ಮೂರ್ ಸರ್ತಿ ಕೊತ್ತ್‌ಸಿರೆನೂ ಹೊಡ್ಯದ ಪಿಸ್ತೂಲ್ ಅಂದ್ ಒಮ್ಮೆನೇ ಹೊಡ್ದಿತ್ತ್. ಕುಞ್ಞಣ್ಣನ ಕೈಯಿಂದ ಅದರ ತೆಕಂಡ ಅಪ್ಪ ಒಮ್ಮೆ ಅತ್ತ ಇತ್ತ ತಿರ್ಗಿಸಿ ನೋಡಿ ಎರ್ಡ್ ಕೈಯಿಂದ ಹಿಡ್ದ್ ಅದರ ಬೊಗ್ಗ್‌ಸಿ ಮುರ್ದೇ ಹಾಕಿದೊ ಮಾತ್ರ ಅಲ್ಲ ಅವನ ಕೆಬಿ ಚೆಂಡೆಗೆ ಒಂದ್ ಪೆಟ್ಟ್ ಕೊಟ್ಟೊ. ಇನ್ನೊಮ್ಮೆ ಕೈ ಬೇರಿಕನ ಭಟ್ರ್ ಅಡ್ಡ ಬಂದ್ ತಡ್ದೊ. ಕೂಸ್‌ನ ಚಿವುಂಟಿದೂನೂ ಅವೇ... ತೊಟ್ಲ್ ತೂಗಿದೂನೂ ಅವೇ. ಅಲ್ಲಿಗೆ ಪಿಸ್ತೂಲ್ ತಯಾರ್ ಮಾಡ್ದ ಒಂದ್ ಮಹಾನ್ ಅಧ್ಯಾಯ ಮುಗ್ದೇ ಹೋಗಿತ್ತ್.

ಗುತ್ತಿನಡ್ಕಂದ ಬಟ್ರ ಹತ್ತಿಕಂಡ್ ಬಂದ ಕುಞ್ಞಣ್ಣ ಆಲೆಟ್ಟಿ ತಲ್ಪಿದ ಸೊಲ್ಪ ಹೊತ್ತ್‌ಲೇ ನಾರಾಯಣನೂ ಆಲೆಟ್ಟಿ ಮುಟ್ಟಿತ್ತ್. ನಾರಾಯಣ ಬಂದದ್ ಏಕೇಂತ ಗೊತ್ತುಟೂಂತ ಅವಂಗೂ ಗೊತ್ತಿತ್ತ್. ಹೇಂಗೆ ಸುರು ಮಾಡ್ದೂಂತ ಒಂದೆರ್ಡ್ ಬೀಡಿ ಎಳ್ಯಕಾಕನ ನಾರಾಯಣನ ತಲೆಗೆ ಹೊಕ್ಕಿತ್ ಹೇಂಗೆ ಸುರುಮಾಡ್ದೂಂತ. ಕಡೇಗೆ ಬುಕ್ಕಿ ನರ್ಕಿ ಹೇಳಿಕೆ ಸುರು ಮಾಡ್ತ್. ಆ ಹುಲಿ ಚರ್ಮ ಮತ್ತೆ ಅದರ ತುಪ್ಪನ ನಾ ನಾಲ್ಕ್ ದಿನ ಬುಟ್ಟ್ ಬಟ್ಟಂಗಾಯಿಗೆ ಹೋಗಿ ಬಾಕನ ತಂದ್ ಕೊಟ್ಟನೇಂತ. ಯಾಗಳೋ ಅವಂಗೆ ಕುಞ್ಞಣ್ಣ ಹೇಳಿತ್ತ್. ನೀ ಹುಲಿ ಹೊಡ್ದರೆ ಒಂದ್ ಚೀಲ ಅಕ್ಕಿ ಕೊಟ್ಟನೇಂತ. ಅಂವ ಬಂದದ್ ಅದ್ಕೇ ಆಗಿತ್ತ್. ಕುಞ್ಞಣ್ಣಂಗೆ ಅದ್ ನೆನ್ಪಿತ್ತ್. ಅವಂಗ ಒಂದ್ ಚೀಲ ಅಕ್ಕಿ ಮಾತ್ರ ಅಲ್ಲದೇ ಅವಂಗೇನ್ ಸಾಮಾನ್ ಬೇಕಾಗಿತ್ತೋ ಎಲ್ಲಾ ಅವಂಗೆ ಕೊಟ್ಟಿತ್. ಅದಾಗಿ ಒಂದೆರಡ್ ದಿನಲಿ ನಾರಾಯಣ ಆ ಚರ್ಮನ ತಂದೂ ಕೊಟ್ಟಿತ್ತ್. ಅದರ ಕಾಂಬಕನೇ ಕುಞ್ಞಣ್ಣನ ಸಿಟ್ಟ್ ನೆತ್ತಿಗೇರಿತ್ತ್. ಹೆದ್ರಿ ಹೆದ್ರಿ ಅಂವ ಅದರ ಕಾಡ್ಲೇ ಒಳ್‌ಂಗ್‌ಸಿತ್ತ್. ಹಾಂಗಾಗಿ ಅದ್ ಅಷ್ಟ್ ಸರಿ ಇತ್ಲೆ. ಪೂರಾ ಬಿಸ್ಲ್ ತಾಂಗದೇ, ಪಿಜ್‌ನ್‌ಗ ತಿಂದ್ ಒಟ್ಟಾರೆ ಅದ್ ಹಾಳಾಗಿ ಹೋಗಿತ್ತ್. ಅಲ್ಲದೆ ಅವು ಅದರ ಬುಡ್ಸಿದೂ ಸರಿ ಇತ್ಲೆ. ಅಂದರೂ ಏನಾರ್ ಆಗಲೀಂತ ಸುಮ್ಮನಾತ್. ಯಾಕೇಂತ ಹೇಳಿರೆ ಅದರ್ಲಿ ಲಾಯ್ಕಿದ್ದ ಮಾಲ್ ಅವಂಗೆ ಸಿಕ್ಕಿತ್ತ್. ಅದ್ ಹುಲಿನ ಉಗ್‌ರ್‌ಗ, ಮತ್ತೆ ಹುಲಿ ತುಪ್ಪ. ಹುಲಿ ತುಪ್ಪಂತ ಹೇಳ್ರೆ ಹುಲಿನ ಚೆರ್ಬಿಂದ ಕಾಸಿ ತೆಗ್ದ ತುಪ್ಪ. ಅದ್ ಅಷ್ಟ್ ಅವಂಗೆ ಸಾಕಿತ್ತ್. ಹುಲಿ ತುಪ್ಪ ಬಾರೀ ಅಪರೂಪದ ವಿಶೇಷ ಮೊದ್ದ. ನೇವಸಕ್ಕೆ ಅದರಷ್ಟ್ ದೊಡ್ಡ ಮೊದ್ದೇ ಇಲ್ಲೆ.

ನಾರಾಯಣ ಹುಲಿ ಹೊಡ್ದ ಸುದ್ದಿ ನಿಧಾನಕ್ಕೆ ಬಾಯಿಂದ ಬಾಯಿಗೆ, ಕೆಬಿಂದ ಕೆಬಿಗೆ ಹರ್ಕಂಡ್ ಹೋಗಿತ್ತ್. ಎಲ್ಲಿ, ಹೇಂಗೆ, ಯಾರಿಗೂ ಗೊತ್ತ್‌ಲೆ. ಅದ್ ಗೊತ್ತಿದ್ದದ್ ಬಡ್ಡಡ್ಕದವುಕೆ ಮತ್ತೆ ಅವನ ಮನೆಯವುಕೆ ಮಾತ್ರ. ಆದರೆ ಆ

ಸಂಗತಿ ಒಂದ್ ಸಂಚಲನನೇ ಮಾಡ್ತ್. ಬೆಡಿ ನಾರಾಯಣಾಂತ ಕರ್‍ಯತಿದ್ದವು ದಿನ ಕಳ್ದಾಂಗೆ ಹುಲಿ ನಾರಾಯಣಾಂತ ಕರ್ಯಕೆ ಸುರು ಮಾಡಿ ಕಡೆಗೆ ಹುಲೀಂತಳೇ ಕರ್ಯಕೆ ಸುರುಮಾಡ್ದೊ. ಹತ್ತ್ ಜನ ಸೇರುವ ಬೇಟೆಲಿ ನಾರಾಯಣ ಈಗ ಒಬ್ಬ ದೊಡ್ಡ ಜನ ಆಗಿ ಕಾಣ್ತಿತ್ತ್. ಅಲ್ಲದೇ ಅವನ ಕೈಲಿ ಕಾಂಬ ಬೆಡಿಗಳೂ ಹಾಂಗೇ ಇದ್ದೊ. ಹೆಚ್ಚಾಗಿ ಬಡ್ಡಡ್ಕ ದೊಡ್ಡಮನೆ ಬಾಬಣ್ಣನವರ ಜೀಕೋ ಜರ್ಮನ್, ಅಪ್ಪಯ್ಯಜ್ಜನ ವಿಂಚೆಸ್ಟರ್ ಸಡನ್‌ಡೆತ್ ನಾರಾಯಣನ ಕೈಲಿ ಇರ್‍ದು ಮಾಮೂಲಾಗಿತ್ತ್. ಅಂವ ಈಗ ಸಾಮಾನ್ಯ ಅಲ್ಲದ ಬೇಟೆಗಾರ ಆಗಿ ಕಂಡ್‌ಕಂಡಿತ್ತ್. ಅದೇ ಉಮೇದ್‌ಲಿ ಕುಞ್ಞಣ್ಣನ ಹಕ್ಕಲೆ ಒಂದು ದಿನ ಬಂದ್ "ಅಣ್ಣ ಜರ್ದಮಾನಿಂದ ಆಚೆ ಬೆಳ್‌ಂದ್‌ರ್ ತಟ್ಟ್‌ಲಿ ಹುಲಿ ಓಡ್ಯಾಡ್ದೆ, ಅಲ್ಲೆಲ್ಲ ಅದ್ ಕೇರಿ ಬೊಡ್ಡ್‌ಟು, ಒಂದಾಳ್ ಎತ್ತರದ ಒರೆಗೆ ಅದ್ ಪರ್ಂಕಿದರ್‌ಲಿ ಸಣ್ಣ, ಸಣ್ಣ ಮರದ ಚೋಲಿ ಒಂದೂ ಇಲ್ಲೆ" ಅವನ ಮಾತ್‌ಗೆ ಹೆಚ್ಚ್‌ನ ಉತ್ಸಾಹ ತೋರ್‍ಸ್‌ದೇ ಕುಞ್ಞಣ್ಣ ಹೇಳಿತ್ತ್. "ಸಾಕ್ ಮಾರಾಯ ಒಂದ್ ಹೊಡ್ಸದ್. ಇನ್ನ್ ಅದರ ರಗಳೆ ಬೇಡಾಂತ ಅವನ ಸುಮ್ಮನೆ ಮಾಡಿತ್ತ್.

***

ನಾರಾಯಣ ಹೋದ ಮೇಲೆ ಕುಞ್ಞಣ್ಣ ಹಾಂಗೇ ಕುದ್ದ್‌ಕಂಡ್ ಎಲ್ಲನೂ ಯೋಚನೆ ಮಾಡ್ತಿತ್ತ್. ಯಾಕೆ ಹೀಂಗೇಂತ. ಮಾಡುದರ ಬುಟ್ಟ್ ಇಂತದರನೇ ಮಾಡಿಕಂಡ್ ಒಳಲೇಂತ ಮನ್ಸ್‌ಲಿ ನೆನ್ಸಿಕಂಡ ಇರಿಕನ ಮೊನ್ನೆ ಮೊನ್ನೆ ನಡ್ದ್ ಹೋದ ಒಂದ್ ಸಂಗತಿ ನೆನ್ಪ್‌ಗೆ ಬಾತ್. ಛೇ! ಹಾಂಗೆ ಆಕೆ ಆಗದಾಗಿತ್ತ್‌ಂತ ಹೇಳಿಕಂಡತ್. ಅಂದ್ ನಡ್ದದ್ ಏನ್‌ಂತ ಹೇಳ್ರೆ ಬಾಳ್‌ಬೊಳ್ಪ್ ಕೇಶವ ಹೈದಂಗೆ ಅರ್ಜಂಟಾಗಿ ಸುಳ್ಯಕ್ಕೆ ಹೋಕೆ ಇತ್ತ್. ಬೆಳ್ಜರಿಗೆ ಎದ್ದವನೇ ಮೋರೆ ತೊಳ್ದ್, ಚಾಯಕುಡ್ದ್ ಪ್ಯಾಂಟ್ ಏರ್‍ಸಿ ಮನೆಂದ ಹೊರ್‍ಟತ್. ಅವನ ಮನೆಂದ ಸುಳ್ಯಕ್ಕೆ ಸುಮಾರ್ ಏಳೆಂಟ್ ಕಿ. ಮಿ. ದೂರ. ಎಂತದಾರ್ ವಾಹನ ಸಿಕ್ಕಿ ಹೋಕೂಂತ ಹೇಳ್ರೆನೂ ಅಚೆ ಕಟ್ಟೆಕಳ, ಮೈಂದೂರು ದಾಟಿ ಎಲಿಕ್ಕಳ ದೊಡ್ಡ ಮಾರ್ಗಕ್ಕೇ ಸೇರೊಕು, ಎಂತಾರ್ ಸಿಕ್ಕಿರೆ ಆತ್ ಇಲ್ಲದಿದ್ದರೆ ಸೀದಾ ನಡ್ಕಂಡೇ ಹೋದೂಂತ ಗೇನ ಮಾಡಿಕಂಡ್ ಬೇಗನೇ ಹೊರ್‍ಟಿತ್ತ್. ಹಾಂಗೆ ನಡ್ಕಂಡ್ ಬಾಕನ ದಾರಿಲಿ ಕಾಡ್‌ಕೋಳಿಗ ಕಾಂಬಕೆ ಸಿಕ್ಕಿಕಾಕನ ಛೆ! ಬೆಡಿ ಓಡ್ಕಂಡ್ ಬಂದಿದ್ದರೆ ಕೋಳಿಯಾರ್ ಸಿಕ್ಕಿತ್ತ್‌ಂತ ನೆನ್ಸಿಕಂಡ್ ನಡ್ಕಂಡ್ ಬರ್‍ತಿತ್ತ್. ಅವಂಗೆ ಗೊತ್ತಿತ್ತೆ. ಯಾಕೆ ಯಾರಿಗೂ ಗೊತ್ತಿತ್ತೆ. ಅವ ಇಂದ್ ಒಂದ್ ದೊಡ್ಡ ಬೇಟೆನ ಸುರುಮಾಡಿ ಸುಳ್ಯಕ್ಕೆ ಹೋದೇಂತ. ಅಂತ ನಡೆ ಅವಂದಾಗಿತ್ತ್. ಹೀಂಗೇ ನಡ್ಕಂಡ್ ಎಲಿಕ್ಕಳ ಹಕ್ಕಲೆ ಮುಟ್ಟಿಕಾಕನ ಉಚ್ಚೆ ಬಾತ್‌ಂತ ಮಾರ್ಗದ ಕರೆಲಿ ಉಚ್ಚೆ ಹೊಯ್ಯಕೆ ನಿತ್ತತ್. ಆಗ ಕೇಳ್ತ್

ಒಂದ್ ಸಣ್ಣ ಸದ್ದ್. ಗುರ್ಕ್ಂತ. ಒಂದ್ ಚೂರೂ ಮಿಸ್ಕದಾಂಗೆ ನಿತ್ತ್‌ಕಂಡ್ ಶಬ್ದ ಬಂದ ಕಡೆ ಸೂಕ್ಷ್ಮಲಿ ನೋಡ್ತ್. ಎಂತದ್ ಹೇಳ್ದು. ಮಾರ್ಗಂದ ಮೇಲೆ ಅಂವ ನಿತ್ತಲ್ಲಿಂದ ಸುಮಾರ್ ಐವತ್ತ್ ಗಜದ ಆಚೆ ಹಿಂಡ್‌ನ ಹಂದಿಗ ಮಲ್ಕ್ಯಂಡ್, ನಿತ್ತ್‌ಕಂಡ್ ಮೊಣ್ಣ್‌ನ ಚುಕ್ಕಿಕಂಡ್ ಇರ್ದು ಕಂಡತ್. ಆ ಕ್ಷಣಲಿ ಅಂವ ಎಲ್ಲಿಗೆ ಹೊರ್ಟದ್, ಎಂತಾ ಕೆಲ್ಸ ಎಲ್ಲಾ ಮರ್ತೇ ಹೋಗಿತ್ತ್. ಆದರೆ ಎಂತಾ ಮಾಡ್ದು ಬೆಡಿ ಇಲ್ಲೆ. ಇನ್ನ್ ಮನೆಗೆ ಹೋಗಿ ಬೆಡಿತಾಕನ ಹಂದಿಗ ಏನ್ ಇವನ ಕಾದ್‌ಕಂಡ್ ಇರಿಕಿಲೆ. ಛೆ ಎಂತದ್ ಮಾಡ್ದುಂತ ನೆನ್ಸಿಕಾಕನ ನೆನ್ಪಾತ್. ಅಲ್ಲೇ ಕೆಳಗೆ ಅರ್ದ ಪರ್ಲಾಂಗ್ ಒಳಗೆ ಬೇಂಕ್ ಮೇನೆಜರ್ ಸೀತಾರಾಮಣ್ಣನ ಮನೆ. ಅವರಕ್ಕಲೆ ಬೆಡಿ ಉಟ್ಟೊಂತ. ಮತ್ತೆ ತಡ ಮಾಡ್ತಲೆ. ಒಂದ್ ಚೂರೂ ಸದ್ದ್ ಮಾಡದಾಂಗೆ ಮೆಲ್ಲಂಗೆ ಹಿಂದೆಕಂಡೆ ನಾಲ್ಕ ಹೆಜ್ಜೆ ನಡ್ದ್. ಅಲ್ಲಿಂದ ಬರೆಕರೆಲೇ ಬೊಗ್ಗಿಕಂಡ್ ನಡ್ಕಂಡ್ ಬಂದ್ ಸೀತಾರಾಮಣ್ಣ ಮನೆಗೆ ಇಳ್ತ್. ಅಷ್ಟೊತ್ತಿಗೆ ಅವು ಬೊಳ್ಳುನ ಸಿಂಗಲ್ ಚಾ ಕುಡ್ದ್ ಸುರೂನ ಈಡ್‌ನ ಎಲಡ್ಕೆ ರೆಡಿಮಾಡ್ತಿದ್ದೊ. ಬೊಳ್ಪುಳ್ಪಗೆ ಕೇಶವ ಬಂದದರ ಕಂಡ್ ಏನೋ ಅವಸರಲಿ ಇದ್ದವನಾಂಗೆ ಇರುದರ ಕಂಡ್‌ದ್ ಏನ್‌ಯ ವಿಶೇಷಾಂತ ಗಡಿಬಿಡಿಲೇ ಕೇಳ್ದೊ. ಕೇಶವ ವಿಷಯ ಹೇಳ್ತ್. ಈಗ ಕೇಶವಂದಲೂ ಹುರುಪುಲಿ ಸೀತಾರಾಮಣ್ಣ ಇದ್ದೊ. ಮತ್ತೊಂದೂ ಮಾತಾಡದೇ ಒಳಗೆ ಹೋದವೇ ಬೆಡಿನನೂ ಬೆಡಿ ಚೀಲನೂ ತಂದ್ ಕೊಟ್ಟೊ. ಒಂದ್ ನಿಮಿಷನೂ ತಡಮಾಡದೇ ಬೆಡಿ ತೆಕಂಡ ಕೇಶವ ಹಂದಿಗ ಇದ್ದಕಡೆಗೆ ಓಡ್ದಾಂಗೆ ನಡ್ತ್.

ಅಂವ ಹೋಗಿ ಸುಮಾರ್ ಹತ್ತ್ ನಿಮಿಷಲಿ ಸುರೂನ ಗುಂಡ್ ಕೇಳ್ತ್. ಒಟ್ಟೊಟ್ಟಿಗೇ ಮತ್ತೆ ಒಂದ್ ಗುಂಡ್ ಕೇಳ್ತ್. ಸೀತಾರಾಮಣ್ಣ ಈಗ ಉತ್ಸಾಹದ ಪರಮಾವದಿಲಿ ಇದ್ದೊ. ಕಿಚ್ಚಿನ ಮೇಲೆ ನಿತ್ತವರಂಗೆ ಅತ್ತಿತ್ತ ಓಡಾಡಿಕಂಡ್ ಅವನ ಕಾಯಿತಿದ್ದೊ. ಹಾಂಗೆ ಅಂಗಳ ಮೂಲೆ ಒರೆಗೆ ನಡ್ದ್ ಹೋಗಿ ಅಂಗಳ ಕೆಳಗೆ ಇದ್ದ ನಿಂಬುಳಿ ಮರದತ್ತ ಒಂದ್ ದೃಷ್ಟಿ ಹಾಕಿ ಅದರ್ಲಿ ನಿಂಬುಳಿ ಉಟ್ಟೊ. ಇಲ್ಲೆನೋಂತ ನೋಡಿಕಂಡೊ. ಮುಂದೆನ ಕೆಲ್ಸ ಏನ್ ಮಾಡ್ದು? ಹಂದಿ ದೊಡ್ಡದೊ? ಸಣ್ಣದೋ? ಎಲ್ಲಾ ಯೋಚನೆ ಮಾಡಿಕಂಡಿರಿಕಾಕಕನನೇ ಕೇಶವ ಕಂಡತ್. ಏನಾತ್‌ಯಾ? ಕೇಶವ ಹೇಳ್ತ್. " ಒಂದ್ ಹಂದಿ ಸಿಕ್ಕಿತಣ್ಣ. ಇನ್ನೊಂದಕ್ಕೆ ಓಡಿಕನ ಹೊಡ್ದೆ . ಅದ್ ತಪ್ಪಿಹೋತ್". ಇದ್ ಸುಮಾರ್ ನಲ್ವತ್ತ್ ಕೆಜಿ ಆದುಂತ ಹೇಳಿ " ಅಣ್ಣ ನೀವು ಕೂಡ್ಲೆ ಹಂದಿನ ಅಲ್ಲಿಂದ ತರೋಕು. ನಂಗೆ ಟೈಮಿಲ್ಲೆ, ನಾ ಅರ್ಜಂಟ್ ಮಂಗ್ಲೂರಿಗೆ ಹೊರ್ಟದ್"ಂತ ಹೇಳಿ ಬೆಡಿನ ಅವರ ಕೈಗೆ ಕೊಟ್ಟ್ ಅವರನೂ ಕರ್ಕಂಡ ಹೋಗಿ ಹಂದಿ ಬಿದ್ದದರ ತೋರ್ಸಿ ಬೀಸ ಸುಳ್ಯದ ಕಡೆಗೆ

ನಡ್ತ್. ಈಗ ಎಲ್ಲಾ ಕೆಲ್ಸ ಸೀತಾರಾಮಣ್ಣನ ಹೆಗಲ್‌ಗೆ ಬೀತ್. ಅವು ಕೂಡ್ಲೆ ಅಲ್ಲೇ ಕರೆಲಿದ್ದ ಮನೆನ ಪಕ್ರು ಅಣ್ಣನ ಕರ್‍ದ್ರೊ. ಬಡ್ಡಡ್ಕಕ್ಕೆ ಕಾಯಿ ಚೊಲ್ಲಿಕೆ ಹೊರ್‍ಟ್ಕಂಡ್ ಇದ್ದ ಪಕ್ರು ಅಣ್ಣ. ಹಂದಿ ಬಿದ್ದ ಸುದ್ದಿಕೇಳ್ದ ಕೂಡ್ಲೇ ಕಾಯಿ ಚೊಲ್ಲುವ ವಿಷಯನೇ ಬುಟ್ಟು ಇತ್ತ ಓಡ್ರೊ. ಅದ್ ಒಂದ್ ಸುಮಾರ್ ನಲ್ವತ್ತ್ ಕೆಜಿನ ಒಳಗೆನ ಹಂದಿ. ಅಂತಾ ಹಂದಿನ ಯಾವ ಮುಲಾಜು, ಆಯಾಸನೂ ಇಲ್ಲದೆ ನೇಚಿ ಹೆಗಲಿಗೆ ಹಾಕಿದ ಪಕ್ರುಅಣ್ಣ. ಸೀತಾರಾಮಣ್ಣನ ಮನೆಕಡೆ ನಡ್ರೊ. ಕ್ವಿಂಟಾಲ್ ಹೊರ್‍ತಿದ್ದ ಪಕ್ರುಣ್ಣಂಗೆ ಇದ್ ಯಾವಲೆಕ್ಕ. ಇಷ್ಟು ಹೊತ್ತಿಗೆ ಸುಮಾರ್ ಗಂಟೆ ಒಂಬತ್ತ್ ಆಗಿತ್ತ್. ಕುಞ್ಞಣ್ಣ ಬಡ್ಡಡ್ಕಂದ ಬೈಕ್‌ಲಿ ಆಲೆಟ್ಟಿಲಿದ್ದ ಅವನ ಅಂಗಡಿಗೆ ಬಂದಿತ್ತಷ್ಟೆ. ಅಂವ ಬಾಕೆ ಮುಂದೆನೇ ಚಂದ್ರ ಅಂಗಡಿ ಬಾಗಿಲ್ ತೆಗ್ದಿತ್ತ್. ಅಷ್ಟೊತ್ತಿಗೆ ಅಲ್ಲಿಗೆ ಬಂದ ಪಕ್ರುಣ್ಣನ ಮಂಜ ಕುಞ್ಞಕಣ್ಣ, ಕುಞ್ಞಣ್ಣನ ಹಕ್ಕಲೆ ಬಂದ್ ಪಿಸಿಪಿಸಿ ಮಾತ್‌ಲಿ ಗುಟ್ಟ್ ಹೇಳ್ತ್. "ಅಣ್ಣ ಬಾಳೆಬೊಳ್ಪು ಕೇಶವಣ್ಣ ಸೀತಾರಾಮಣ್ಣನ ಬೆಡಿಲಿ ಒಂದ್ ಹಂದಿ ಹೊಡ್ದ್ರೊಳೊ. ಅಂವು ಹಿಂಡ್‌ನ ಹಂದಿಗ ಅಣ್ಣ. ಸುಮಾರ್ ಹಂದಿಗ ಇದ್ದೊಗಡಂತ ಹೇಳಿ ಈಗೊಳು ಅವು ಅಲ್ಲೇ ಇರುವೊನೋ ಅಣ್ಣ? ಹೋಗಿ ನೋಡೊಮೊನೋ?"... ಹಾಂಗೆ ಹೇಳಿ ಉತ್ತರಕ್ಕೆ ಕಾಯ್ತಿತ್ತ್. ನಿಂಗೆ ಎಲ್ಲೋ ಹುಚ್ಚ್. ಹಿಂಡ್‌ನ ಹಂದಿಗ ಗುಂಡಾದ ಮೇಲೆ ಅಲ್ಲಿ ನಿಲ್ಲುವೊನೊ.. ನಿಲ್ಲಿಕಿಲೇಂತ ಹೇಳಿ ಕುಞ್ಞಣ್ಣ ಅವನ ಉತ್ಸಾಹಕ್ಕೆ ತಣ್ಣೀರ್ ಹಾಕಿತ್. ಅದ್ ಕಳ್ದ್ ಸೊಲ್ಪ ಹೊತ್ತಾಕನ ಮೈಂದೂರ್ ಅಣ್ಣನ ಮಂಜ ಬೈಕ್‌ಲಿ ಆಲೆಟ್ಟಿಗೆ ಅವಸರಲಿ ಬಂದವನೇ ಕುಞ್ಞಣ್ಣ ಅಲ್ಲಿ ಹಂದಿಗಳ ಹಿಂಡೇ ಉಟ್ಟು, ಬೊಳ್ಪುಗೆ ಕೇಶವ ಒಂದ್ ಹಂದಿನ ಹೊಡ್ತ್‌ಗಡ. ಬೇಗ ಬೆಡಿ ತೆಕಂಡ್ ಬಾ ಇನ್ನೂ ಹಂದಿಗ ಒಳೊಗಡಂತ ಅವಸರ ಮಾಡ್ತ್. ಯಾರ್ ಏನ್ ಹೇಳ್ರೆನೂ ಕುಞ್ಞಣ್ಣಂಗೆ ಗೇರೆಂಟಿ ಗೊತ್ತಿತ್ತ್ ಹಂದಿಗ ಹಾಂಗೆ ಅಲ್ಲೇ ಇರಿಕಿಲೇಂತ. ಅಂದರೂ ಸುಂದರ ಅಷ್ಟ್ ಹಠ ಮಾಡಿಕನ ಎಂತದಾರ್ ಆಗಲಿ ಒಮ್ಮೆ ಹೋಗಿ ನೋಡಿಯೇ ಬುಡೊಮೋಂತ ಬೆಡಿನೂ ತೋಟೆನೂ ತೆಕಂಡ್ ಅವನ ಬೈಕ್ ಹಿಂದೆ ಹತ್ತಿಕುದ್ದತ್. ಅವು ಎಲಿಕ್ಕಳ ಮೈಂದೂರು ಜೋಡ್ ಮಾರ್ಗದ ಹಕ್ಕಲೆ ಬಂದ್ ಬೈಕ್ ನಿಲ್ಸಿಕಾಕನ ಅಲ್ಲಿ ಸ್ವಲ್ಪ ಮೇಲೆ ಜಾಗೆಂದ ಮೇಲೆ ಮೇಲೆ ಎರ್‍ಡ್ ಗುಂಡ್ ಕೇಳ್ತ್. ಅಲ್ಲಿದ್ದ ಗೊಟ್ಟೆ ಹಣ್ಣಿನ ಬೊಳ್ಳಿಕರೆನ ಪಾರೆಕಲ್ಲ್ ಮೇಲೆ ನಿತ್ತ್‌ಕಂಡಿದ್ದ ರಾಂಪ ಬಾವ ಮತ್ತುನೂ ಬೆಡಿನ ಒಂಬಿಸಿಕಂಡ್ ಕಾಣ್ತಿದ್ರೊ. ಅವರ ಹಿಂದೆ ಅಕ್ಕೆ ತೋಟೆ ಕೊಡಿಕೆ ತೋಟೆ ಕೈಲಿ ಹಿಡ್ಕಂಡ್ ಎಲಿಕ್ಕಳ ಬಟ್ರ ಮಂಜ ನಿತ್ತಿತ್ತ್. ಮಾರ್ಗದ ಕರೆಲಿ ಏಳೆಂಟ್ ಜನ ನಿತ್ತಿದ್ರೊ. ರಾಂಪ ಬಾವಂದಳೂ ಆಚೆ ನಿತ್ತವು ಮೇಲೆ ದಾಟಿತ್, ಒಂದ್ ಕುತ್ತ ಕೆಳಗಿಳ್ತ್‌ಂತ ಬೊಬ್ಬೆ ಹೊಡ್ದ್ ಹೇಳ್ತಿದ್ರೊ. ಒಟ್ಟ್‌ಲಿ

ಅದೊಂದ್ ರಣರಂಗದ ಹಾಂಗೆ ಕಾಣ್ತಿತ್ತ್. ಇದೆಲ್ಲದರ ನಡುಲಿ ಮಾರ್ಗದ ಮೋರಿನೊಂದರ ಮೇಲೆಂದ ನಾಕಾರ್ ಹೈದಂಗ ಸೈಸ್ ಕಲ್ಲ್, ಕಾಡ್ ಕಲ್ಲ್‌ಗಳ ಮೇಲೆಂದ ಎತ್ತಿ ಮೋರಿ ಕೆಳಗೆ ಹಾಕ್ತಿದ್ದೊ. ಬನ್ನಿ ಅಣ್ಣ ಇಲ್ಲೊಂದ್ ಹಂದಿ ಉಟ್ಟೊಂತ ಹೈದಂಗ ಕಿರ್ಚಿಕನ ಕುಞ್ಞಣ್ಣ ಸೀದಾ ಅತ್ತ ಓಡಿ ಮೋರಿ ಕೆಳಗೆ ಇಣ್ಕಿತ್. ಅದರ ನೋಡಿ ತಲೆ ಮೇಲೆ ಮರ ಬಿದ್ದಾಂಗೆ ಆಗಿತ್ತ್ ಅವಂಗೆ. ಅಂವ ಏನ್ ನೆನ್ನಿಕಂಡ್ ಇತ್ತೋ ಅದ್ ನಡ್ದೇ ಹೋಗಿತ್ತ್. ಒಂದ್ ಹತ್ತಿಪ್ಪತ್ತ್ ಕೆಜಿ ತೂಕದ ಅರೆ ಪೆಟ್ಟಾದ ಹಂದಿ ಮರಿನ ಮೇಲೆಗೆ ಹೈದಂಗ ಕಲ್ಲ್ ನೇಚಿ ಹಾಕ್ತಿದ್ದೊ. ಅದೊಂದ್ ಬಿಳಿಕಪ್ಪು ಮಂಗಳ ಬಣ್ಣದ ಹಂದಿ. ಕುಞ್ಞಣ್ಣನ ಸಿಟ್ಟ್ ನೆತ್ತಿಗೇರಿತ್ತ್. "ಒಮ್ಮೆ ನಿಲ್ಸಿಯ" ಜೋರ್ ಕಿರ್ಚಿತ್. ಅವನ ಕೋಪ ಕಂಡ್ ಎಲ್ಲವೂ ಸುಮ್ಮನಾದೊ. ಬೇನೆ ತಿಂದ ಹಂದಿ ಮರಿ ಮಾತ್ರ ಕಿರ್ಯೋ.. ಕಿರ್ಯೊ ಮರ್ಡ್‌ತಿತ್ತ್. ಒಟ್ಟಿಗೆ ಸುಂದರನಕ್ಕಲೆ ಕುಞ್ಞಣ್ಣ ಹೇಳ್ತ್ ಕೂಡ್ಲೆ ಬೈಕ್ ತೆಕಂಡ್ ಮನೆಗೆ ಹೋಗಿ ನಿಮ್ಮ ಸಾಂಕಿದ ಹಂದಿಗ ಮನೆಲೆ ಒಳನೋ ಇಲ್ಲೆನೋ ನೋಡಿ ಬಾಂತ ಹೇಳ್ತ್. ಅಲ್ಲಿವರೆಗೆ ಅಂತದೊಂದ್ ಸಂಶಯನೇ ಇಲ್ಲದೆ ಸಂತೋಸಲಿ ಇದ್ದ ಸುಂದರನ ಮೋರೆ ಒಮ್ಮೆ ಕಪ್ಪಾಗಿತ್ತ್. ಏನೂ ಮಾತಾಡದೇ ಅಂವ ಬೈಕ್ ಹತ್ತಿತ್. ಅಷ್ಟೊತ್ತಿಗೆ ಕೇಳ್ತ್ ಗುಡ್ಡೆ ಕೊಡಿಂದ ಒಂದ್ ಗುಂಡ್. ಪರಿಸ್ಥಿತಿ ಎಲ್ಲವ್ಕೂ ಅರ್ಥ ಆಗಿತ್ತ್. ಎಲ್ಲವೂ ಒಟ್ಟಿಗೆ ಬೊಬ್ಬೆ ಹೊಡ್ದೊ. ಹೊಡಿಬಡಿ... ಹೊಡಿಬಡಿ ಅದ್ ಊರ್ ಹಂದೀಂತ. ಅಷ್ಟು ಹೊತ್ತಿಗಾಗಲೇ ನಡಿವಷ್ಟೆಲ್ಲಾ ನಡ್ದ್ ಹೋಗಿತ್ತ್. ಮೈಂದೂರ್ ಅಣ್ಣ ಸಾಂಕಿದ ಎಂಟ್ ಹಂದಿಗಳಲಿ ಆರ್ ಸತ್ತ್ ಬಿದ್ದಿತ್ತ್. ಕಲ್ಲ್ ಎತ್ತಿ ಹಾಕಿಕಂಡಿದ್ದ ಮರಿ ಒಂದ್ ಅರೆ ಪ್ರಜ್ಞೆಲಿ ಮರ್ಚ್‌ಕಂಡ್ ಇತ್ತ್. ಒಂದ್ ದೊಡ್ಡ ಹಂದಿ ಈ ಗದ್ದಳಲಿ ಎಲ್ಲಿ ಹೋತ್‌ಂತಳೇ ಗೊತ್ತಾತ್ಲೆ. ಸೇರ್ದ ಜನಂಗ ಎಲ್ಲಾ ತಲೆಮೇಲೆ ಕೈ ಹೊತ್ತ್ ಕುದ್ದಿದ್ದೊ. ರಾಂಪ ಬಾವ ಹೊಡ್ದ ಬೆಡಿನ ಓನರ್ ಬಟ್ರ್ ಬೆಡಿ ಸಮೇತ ಅಲ್ಲಿಂದ ಕಾಣೆ ಆಗಿದ್ದೊ. ಗುಂಡ್ಯ ಮೇದಪ್ಪ ಬೆಡಿಮನೆಲಿ ಹಿಸಿ ಬನ್ನೇಂತ ಮನೆಕಡೆ ಹೋತ್. ಮುಂದೇನ್ ಮಾಡ್ದು. ಎಲ್ಲರ ತಲೆನ ಚಿಂತೆನೂ ಅದೇ ಆಗಿತ್ತ್. ಕಾಡ್‌ಲೇ ಹುಟ್ಟಿ ಕಾಡ್‌ಲೇ ಬೆಳ್ದ ಕೇಶವಂಗೆ ಅಂವ ಹೊಡ್ದದ್ ಊರ್ ಹಂದಿಂತ ಬಿದ್ದ ಹಂದಿನ ನೋಡಿಕಾಕನೇ ಗೊತ್ತಾಗಿತ್ತ್. ನಡ್ದ ಅಚಾತುರ್ಯಕ್ಕೆ ಅವಂಗೆ ತಕ್ಷಣ ಕಂಡ ಪರಿಹಾರ ಅಲ್ಲಿಂದ ಜಗೆ ಕಾಲಿಮಾಡ್ದೇ ಆಗಿತ್ತ್. ಹಾಂಗೇ ಅಂವ ಬೆಡಿನ ಸೀತಾರಾಮಣ್ಣಂಗೆ ಕೊಟ್ಟ್ ಅವಸರವಸರಲಿ ಅಲ್ಲಿಂದ ಹೊರ್ಟಿತ್ತ್. ಆಗ ಆ ಕ್ಷಣಲಿ ಅಲ್ಲಿಂದ ಹೋದೇ ಅವಂಗೆ ಮುಖ್ಯ ಆದ ಕಾರಣ ಮುಂದೆ ಏನಾದೂಂತ ಯೋಚಿಸಿಕೂ ಹೋಗದೆ ತಪ್ಪುನ ಹೇಳದೇ ಹೋಗಿತ್ತ್. ಅಂವ ಹೇಳದ ಕಾರಣ ಮತ್ತೆ ಐದ್ ಹಂದಿ ಸತ್ತ್ ಬಿದ್ದಿದ್ದೊ. ಮೈಂದೂರ್ ಮನೆಗೆ

ಹೋಗಿ ಬಂದ ಸುಂದರ ತಲೆಗೆ ಕೈ ಹೊತ್ತ್ ಕುದ್ದಿತ್ತ್. ಅವನ ಅಪ್ಪ ಬೊಳ್ಪುಗೇ ಎದ್ದ್ ಮಂಗ್ಳೂರಿಗೆ ಹೋಗಿದ್ದೊ. ಅವು ಬಂದ ಮೇಲೆ ಏನಾದೋ. ಎಂತ ಕತೆನೋ..... ಏನಾದರೂ ಮಾಡ್ ಕುಞ್ಞಣ್ಣಾಂತ ಎಲ್ಲಾ ಬಾರನ ಅವಂಗೆ ಹೊರ್ಸಿ ದೊಂಡೆ ಕಟ್ಟಿದವರಾಂಗೆ ಕುದ್ದಿತ್ತ್. ಸೀತಾರಾಮಣ್ಣನ ತಲೆಗೆ ಅವ್ಕೆ ಗೊತ್ತಿಲ್ಲದಾಂಗೆ ಕೇಶವ ಹೊರೆ ಹೊರ್ಸಿಹೋಗಿತ್ತ್. ಈಗ ಆ ಹೊರೆ ಸುಂದರನ ಮೇಲೂ ಇತ್ತ್. ಮೈಂದೂರು ಅಣ್ಣಂಗೂ ಕುಞ್ಞಣ್ಣಂಗೂ ಒಳ್ಳೆದಿದ್ದ ಕಾರಣ ಇದರ ಹೇಂಗಾರ್ ಮಾಡಿ ಸರಿ ಮಾಡಿಕೆ ಅವನೇ ಸರೀಂತ ಅವಿಬ್ಬರೂ ಎಲ್ಲ ಸರಿಮಾಡುವ ಹೊರೆನ ಕುಞ್ಞಣ್ಣನ ತಲೆಗೆ ಕಟ್ಟಿ ಕುರೆಸತ್ತ ಆಟಗಾರನಂಗೆ ಕುದ್ದಿದ್ದೊ. ಮೈಂದೂರಣ್ಣನೊಟ್ಟಿಗೆ, ಕುಞ್ಞಣ್ಣನೊಟ್ಟಿಗೆ ಮಾನಸಿಕವಾಗಿ ಸ್ವಲ್ಪ ವೈಯಕ್ತಿಕ ಕಾರಣಂದ ಅಸಮಧಾನಲಿ ಇದ್ದ ರಾಂಪ ಬಾವ ಗಡ್ಡ ಪೂಜಿಕಂಡ್ ಬಾಯಿಂದ ಮಾತ್ ಹೊರ್ಡದ ತರಲಿ ನಿಂತಿದ್ದೊ. ಕಾಡಲೇ ಇದ್ದ ಕಾಡನನೇ ಆರ್ದ್ ಕುದ್ದಂತ ಮೇಧಾವಿ ಬೇಟೆಗಾರ ರಾಂಪ ಬಾವ ಮನ್ಸ್‌ಲೇ ನೆನ್ಸಿಕಣ್ತಿದ್ದೊ. ಯಾಕೆ ನಂಗೆ ಹೀಂಗಾತ್? ಯಾಕೆ ಒಂದ್ ಸಣ್ಣ ಸೂಚನೆನೂ ಮನ್ಸ್‌ಲಿ ಬಾತಲೆಲೆ. ತಥ್ ಹುಚ್ಚ್‌ಹುಲ್ಲ್ ಮೆಟ್ಟಿದೆನೋ.... ಅವರೊಳಗೇ ನೆನ್ಸಿಕಂಡೊ.

ಒಂದ್ ಅಧ್ಯಾಯ ಅಲ್ಲಿಗೆ ಮುಗ್ದಿತ್ತ್. ಇನ್ನುಳ್ದದಕ್ಕೆ ಮೈಂದೂರಣ್ಣ ಮಂಗ್ಳೂರ್‌ಂದ ಬರಕಾಗಿತ್ತ್. ಈ ನಡುಲಿ ಸೀತಾರಾಮಣ್ಣ ಸುಂದರನ ಕರ್ಕಂಡ್ ಬಡ್ಡಡ್ಕ ಬಾಬಣ್ಣನವರಲ್ಲಿಗೆ ಹೋಗಿ ನಡ್ದ್ ಸಂಗತಿ ಎಲ್ಲಾ ಹೇಳ್ದೊ. ಯಾಕೇಂತ ಹೇಳ್ರೆ ಬಡ್ಡಡ್ಕ ಬಾಬಣ್ಣನವುನೂ ಮೈಂದೂರ್ ಅಣ್ಣನೂ ಅತ್ಯಂತ ಹಕ್ಕಲೆನ ಜೋಸ್ತಿಗ ಮಾತ್ರ ಅಲ್ಲ. ಒಂದೇ ಕುಟುಂಬದವು. ಹೆಚ್ಚಿ ಕಡಿಮೆ ಆಕೆ ಬುಡಿಕಿಲೆಂತ ಧೈರ್ಯ ಕೊಟ್ಟ್ ಹಂದಿನ ಮಾಸ ಮಾಡಿಕೆ ಅವು ಹೇಳ್ದ ಮೇಲೇ ಅಲ್ಲಿಂದ ಬಂದೋ. ಸೀತಾರಾಮಣ್ಣಂಗೆ ಸಮಾಧಾನ ಆದರೂ ಸುಂದರಂಗೆ ಎಲ್ಲವರ್‌ಂದ ಹೆಚ್ಚ್ ಅವನ ಅಪ್ಪನ ಬಗ್ಗೆ ಗೊತ್ತಿತ್ತ್. ಹಾಂಗೂ ಹೀಂಗೂ ಅಲ್ಲಿದ್ದ ಜನಂಗ ಎಲ್ಲಾ ಸೇರಿ ಸತ್ತ ಆರ್ ಹಂದಿಗಳನೂ ಮಾಸ ಮಾಡ್ದೊ. ಹಿಂಬತ್‌ಗೆ ಮೈಂದೂರ್ ಅಣ್ಣ ಮನೆಗೆ ಮುಟ್ಟಿಕೆ ಮುಂದೆನೇ ಸುಳ್ಯಲೇ ಸಂಗತಿ ಗೊತ್ತಾಗಿತ್ತ್. ಅವ್ಕೆ ಸಿಡ್ಲ್ ಹೊಡ್ದಾಂಗೆ ಆಗಿತ್ತ್. ಏನ್ ಮಾಡ್ದುಂತಳೇ ಗೊತ್ತಾತ್ಲೆ. ಅಲ್ಲದೆ ಅವರ ಮಂಜನೂ ಅದರ್ಲಿ ಸೇರಿಹೋದ್ದ್ ಗೊತ್ತಾಗಿ ಕೋಪಲಿ ಉಂಗುಷ್ಟಂದ ನೆತ್ತಿನ ಒರೆಗೆ ಕಿಡಿ ಆಗಿದ್ದೊ. ಕಡೆಗೆ ಅವು ಮನೆ ತಲ್ಪಿದ್ ಗೊತ್ತಾಗಿ ಕುಞ್ಞಣ್ಣ ಮತ್ತೆ ಸೀತಾರಾಮಣ್ಣ ಅವರಲ್ಲಿಗೆ ಹೋದೊ. ಅವರ ಸಮಾಧಾನ ಮಾಡಿಕೆ ಅವ್ಕೆ ಇಬ್ಬರಿಗೂ ಬಾರೀ ಕಷ್ಟ ಆದರೂನೂ ಹೇಂಗೋ ಸಮಾಧಾನ ಮಾಡಿ ಬಂದೊ. ಎಲಿಕ್ಕಳ ಮೋರಿ ಮೇಲಿಂದ ಕಲ್ಲ್ ಎತ್ತಿ ಹಾಕಿ ಕೊಲ್ಲಿಕೆ ನೋಡ್ತಿದ್ದ ಹಂದಿ ಮರಿ ಮಾತ್ರ ಸತ್ತಿತ್ಲೆ.

ಅದರ ಪೂವಪ್ಪಣ್ಣಂಗೆ ಸಾಂಕಿಕೆ ಕೊಟ್ಟೊ. ಅಂದ್‌ಗೆ ಅಷ್ಟೆಲ್ಲ ಕಷ್ಟ ಆಗಿದ್ದರೆ ಇಂದ್ ಅದರ ನೆನ್ಸಿಕಂಬಕನ ಕುಞ್ಞಣ್ಣಂಗೆ ನೆಗೆ ಬರ್ತಿತ್. ಆ ಬೇಟೆಲಿ ಎಂಟ್ ಹಂದಿಗಳ್ಲಿ ಒಂದ್ ದೊಡ್ಡ ಹಂದಿ ಓಡ್ದ್ ಎರ್ಡ್ ದಿನಂದ ಮೇಲೆ ಮನೆಗೆ ಬಂದಿತ್.

ಕುಡಕಲ್ಲ್ ಕಳಿಯಾಟ ಮುಗ್ದ್ ಆಲೆಟ್ಟಿ ಒತ್ತೆಕೋಲ ಕಳ್ದ್, ತೊಡಿಕಾನ ಆಗಿನ ಮುಗಿವಲ್ಲಿವರೆಗೆ ಕಾಂಬಕೇ ಸಿಕ್ಕದ ನಾರಾಯಣ ಒಂದ್ ದಿನ ಆಲೆಟ್ಟಿಗೆ ಬಂದ್ ಕುಞ್ಞಣ್ಣನ ಅಂಗ್ಡಿ ತಿಂಟೆಲಿ ಕುದ್ದ್ ಕಂಡ್ ಇತ್. ಇಂದ್ ಏನೋ ಒಂದ್ ಅಪ್ಲಿಕೇಶನ ಇರೊಕುಂತ ಗೊತ್ತಾಗಿ ಕುಞ್ಞಣ್ಣನೂ ಎಂತದ್ಕೆ ಬಂದದೂಂತಳೂ ಕೇಳ್ತ್‌ಲೆ. ಸುಮಾರ್ ಹೊತ್ತ್ ಹಾಂಗೇ ಕುದ್ದ್‌ಕಂಡಿದ್ದವ ಅಣ್ಣ ಕೇಳದಿದ್ದರೂ ಅವನೇ ಹೇಳ್ತ್. ಇಲ್ಲೆಪ್ಪ ನಾ ಹೀಂಗೇ ಬಂದದ್‌ಂತ ರಾಗಲಿ ಮಾತ್ ಸುರು ಮಾಡ್ತ್. ಸೊಲ್ಪ ಹೊತ್ತ್ ಸುಮ್ಮನಿದ್ದವ ಅಣ್ಣ ನಂಗೆ ನಿಮ್ಮಕ್ಕಲೆ ಮಾತಾಡಿಕೆ ಇತ್ತ್‌ಂತ ಮಾತ್ ಸುರುಮಾಡಿಕನ ಭುಜಂಗ ಗಾರ್ಡ್ ಅಂಗಡಿಗೆ ಎಂತದೋ ಸಾಮಾನ್ ಕೇಳಿಕೆ ಬಂದೊ. ಅವು ಒಂದೆರ್ಡ್ ಮಾತಾಡಿ ಅಲ್ಲಿಂದ ಹೋದೊ. ಇನ್ನ್ ನಾರಾಯಣ ಹೇಳಿಕೆ ಬಂದದ್ ಎನ್‌ಂತ ಕೇಳಮೋಂತ ನೋಡ್ರೆ ಅಂವ ಅಲ್ಲಿ ಇಲ್ಲೆ. ಅಂವ ಅಲ್ಲಿಂದ ಮಾಯಕ ಆದ ರೀತಿಲಿ ಕಾಣೆ ಆಗಿತ್. ಈ ಸುಟ್ಟವ ಎಲ್ಲಿ ಹೋತ್‌ಂತ ಅತ್ತ ಇತ್ತ ನೋಡ್ರೆ ಅಂವ ಅಂಗ್ಡಿ ಒಳೆಗೆ ಉಟ್ಟು.

ಅಂವ ಅಲ್ಲಿ ಅಕ್ಕಿ ಚೀಲ ಒಂದರ ಹಿಂದೆ ಮುರ್ಟಿದಾಂಗೆ ಚುರ್ಕರ ಕುದ್ದ್‌ಕಂಡ್ ಪಿಳಿಪಿಳಿ ನೋಡ್ತಿತ್. ಇವಂಗೆಂತದಾತಪ್ಪಂತ ನೆನ್ಸಿಕನ ಕುದ್ದಲ್ಲಿಂದಳೇ ಅವ ಪಿಸಿ ಪಿಸಿಂತ ಕೇಳ್ತ್. ಅವು ಹೋದೋನೋಂತ. ಅಷ್ಟೊತ್ತಿಗೆ ಕುಞ್ಞಣ್ಣಂಗೆ ಗೊತ್ತಾತ್ ಅಂವ ಅಡಿಂಗಿ ಕುದ್ದದ್ ಭುಜಂಗ ಗಾರ್ಡ್‌ನ ನೋಡೀಂತ. ಓಹೋ... ಇಂವ ಎಲ್ಲಿಯೋ ಮರ ಕಡ್ಡಿರೊಕು ಅದ್ಕೆ ಅಡಿಂಗಿ ಕುದ್ದದಾಗಿರೊಕುಂತ ಹೇಳಿ ಎಂತದ್‌ಕೆ ಮಾರಾಯ ಅಡುಂಗುದು, ಎಂತ ಮಾಡ್ಯೊಳ ನೀಂತ ಕೇಳ್ತ್. ಹೇಳ್ನೇಂತ ತಲೆ ಅಲ್ಲಾಡ್ಸಿ ಮೆಲ್ಲ ಆ ಮೂಲೆಂದ ಎದ್ದ್ ಹೊರಗೆ ಬಂದ್ ಮಾರ್ಗಕಡೆ ನೋಡ್ತ್. ಅಷ್ಟೊತ್ತಿಗೆ ಪಂಜಿಮಲೆ ಒತ್ತೆಕೋಲ ನಡಿವಲ್ಲಿಂದ ಮೇಲೆ ಗಾರ್ಡ್ ಗುಡ್ಡೆ ಹತ್ತುದು ಕಂಡ್ ನಾರಾಯಣಂಗೆ ಹೋದ ಜೀವ ಬಂದಾಂಗೆ ಆಗಿತ್. ಅವನ ಈ ಪೇಚಾಟ ಕಂಡ್ ಎಂತದ್‌ಯಾ ಒಮ್ಮೆ ಬೊಗ್ಳ್ ಮರ ಕಡ್ದೊಳನೋ ಜೋರ್‌ಲಿ ಕೇಳ್ತ್ ಕುಞ್ಞಣ್ಣ.

ಹೋದ ಭುಜಂಗ ಎಲ್ಲಿಯಾರ್ ಮತ್ತೆ ಬಂದ್ ಬುಡ್ದೋಂತ ಹೆದ್ರಿಕಂಡ್ ಹೆದ್ರಿಕಂಡೇ ಹೇಳಿಕೆ ಸುರುಮಾಡ್ತ್. ಅಂವ ಹೇಳ್ದ್ ಹೀಂಗಿತ್. ರಾಮಣ್ಣ ಬಂಟ್ರ್ ಹತ್ತ್ ಬೆತ್ತದ ಹೆಡೆಗೆ ಅರ್ಜಂಟ್ ಆಗಿ ಬೇಕೂಂತ ಕೇಳ್ತಿದ್ದೊಗಡ. ಮುಳ್ಳೇರಿಯಾ ಕಡೆಂದ ಬಾವ ಕೊರ್ಗರ್ ಇಳಿಂಜಿರ್ ಬೊಳ್ಳಿನ ಕಡ್ದ್ ಹೆಡೆಗೆ, ಕೈ

ಕುಕ್ಕೆ, ಕೂಂಟಗೆ ಮಾಡ್ತಿದ್ದೊ. ಆದರೆ ರಾಮಣ್ಣ ಬಂಟ್ರ್‌ಗೆ ಬೇಕಾದ್ದ ಬೆತ್ತದ ಹೆಡೆಗೆ. ಹೆಡೆಗೆ ಮಾತ್ರ ಅಲ್ಲ, ಎಲ್ಲಾ ಮೆಡ್ಚಲಿಗೂ ನಾರಾಯಣ ಹೇಳ್ದ ಕೈ. ಅವನ ಹಕ್ಕಲೆ ಹೇಳಿಕನ ನಾ ಮಾಡಿಕೊಟ್ಟನೇಂತ ಹೇಳಿತ್ತ್. ಅಂವ ಹೇಳ್ರೆನೂ ಬೆತ್ತ ಇದ್ದದ್ ಕಾಡ್‌ಲಿ. ಅದರ ಕಡ್ಯಕೆ ಯಾರಿಗೂ ಹಕ್ಕಿಲ್ಲೆ. ಅಂದರೆನೂ ಕಾಡಲಿ ಬೆಳ್ದ ಬೆತ್ತನ ಫಾರೆಸ್ಟ್ರಿಗೆ ಯಾರಿಗೂ ಗೊತ್ತಾಗದಿದ್ದಾಂಗೆ ಕಡ್ದ್ ಹೆಡಗೆ ಮಾಡ್ದು ನಾರಾಯಣಂಗೆ ಒಂದ್ ಕಸುಬೇ ಆಗಿ ಹೋಗಿತ್ತ್. ಹಾಂಗೇ ಅಂವ ಆ ಕೆಲ್ಸನ ಒಪ್ಪಿಕಂಡಿತ್ತ್. ದುಡ್ಡ್ ಬಂದದೇಂತಾದರೆ ದಡ್ಡಂಗೆನೂ ಬುದ್ದಿ ಬಂದದೆ. ನಾರಾಯಣ ಮರ್ದಿನನೇ ಬೆತ್ತ ಕಡ್ದ್ ತಾಕೆ ಜೋನಪ್ಪಾಡಿ ಕಾಡ್‌ಗೆ ಹೋಗಿತ್ತ್. ಚೋನಪ್ಪಾಡಿ! ಕಾಡ್‌ಂತ ಹೇಳ್ರೆ ಅದ್ ಬರೇ ಕಾಡಲ್ಲ. ಪಶ್ಚಿಮ ಘಟ್ಟದ ಕಾಡ್‌ನ ಒಂದ್ ಕಡೇ ಕಡೆಲಿ ಇರುವ ಕರೇನ ಕಾಡ್ ಅದ್. ಅದರಂದ ಸುಮಾರ್ ಹದಿನೈದ್ ಇಪ್ಪತ್ತ್ ಕಿ.ಮೀ. ಆಚೆಗೆ ಅರಬ್ಬೀ ಸಮುದ್ರನೇ ಸಿಕ್ಕಿದೆ. ಅಂದರೂ ಆ ಗುಡ್ಡೆ ಬೆಟ್ಟ ಕರಾವಳಿ ಅಲ್ಲ. ಯಾಕೇಂತ ಹೇಳ್ರೆ ಕರಾವಳಿಗಳ ಯಾವುದೇ ಹೋಲಿಕೆ ಅದ್ಕೆ ಇಲ್ಲೆ. ಆ ಗುಡ್ಡೆಂದ ಕೆಳಗೆ ಇಳ್ದ ಮೇಲೆನೆ ಕರಾವಳಿಂತ ಕರ್ಸಿಕಂಡದೆ. ಆದರೆ ಇದ್ ದಟ್ಟ ಮಲೆನಾಡ್. ಹತ್ತ್, ನೂರ್, ಸಾವಿರ ಸಸ್ಯ ಸಂಪತ್ತ್‌ಗಳ ಹೊತ್ತ ಸಮೃದ್ಧಿನ ಈ ಕಾಡ್‌ಲಿ ವನ್ಯ ಜೀವಿ ಸಂಕುಲಗಳೇ ನೆಲ್ಸಿಕಂಡಿದ್ದೋ. ಅದ್ ಸಾಮಾನ್ಯ ಜೀವ ಜಗತ್ತ್ ಅಲ್ಲ. ಅಲ್ಲಿ ಪ್ರಪಂಚಲೇ ಬೇರೆಲ್ಲೂ ಕಾಣದಿರುವಂತ ಜೀವ ವೈವಿಧ್ಯತೆಗ ಒಳೊ. ಸಸ್ಯ ಸಂಕುಲಗ ಒಳೊ. ಕರ್ನಾಟಕದ ಅತ್ಯಂತ ದೊಡ್ಡ ಸರ್ಪ ಸಂಗತಿಗಳ ಕಾಡಾಗಿತ್ತ್ ಚೋನಪ್ಪಾಡಿ. ನಿಸರ್ಗ ಹೇಳುವ ಪಾಟನ ಯಾವ ಶಾಲೆನೂ ಯಾವ ಯುನಿವರ್ಸಿಟಿನೂ ಹೇಳ್ದುಲೆ. ಅದರೊಳಗೆ ಒಂದಾಗಿ ಬೊದ್ಕಿ ಬಾಳುವ ಜೀವಿಗಳಿಗೆ ಯಾವ ವಿಶ್ವವಿದ್ಯಾಲಯಗಳೂ ಪದವಿಗಳ ಕೊಡ್ದುಲೆ. ಆದರೆ ಅಲ್ಲಿನವು ಅವರ ಬೊದ್ಕುವ ರೀತಿಲಿ ಎಲ್ಲವರ್‌ಂದಳೂ ಮೇಲಿದ್ದವೆ. ಅಷ್ಕೆ ಪದವಿ, ಡಾಕ್ಟರೇಟ್‌ಗ ಇರ್ದುಲೆ. ಆದರೂ ಅವು ಅದೆಲ್ಲದರ ಒಂದ್ ಸಂಗಮ ಆಗಿದ್ದವೆ. ಅಲ್ಲಿನ ಒಂದೊಂದು ಜೀವ ಜಂತುಗಳ ಜೀವನಡಿಗೆನ ಸರ್ವ ಸಂಗತಿಗಳೂ ಅಷ್ಕೆ ಗೊತ್ತಿದ್ದದೆ. ಅಂತ ಕಾಡ್‌ಗ ಅಲ್ಲಿ ಇತ್ತ್. ಇಲ್ಲಿ ಚೋನಪ್ಪಾಡಿ ಒಂದೇ ಅಲ್ಲ. ಬಾರೀ ದೂರಂದ ಬೆಳ್ದ್ ಬಂದ ಒಂದ್ ದಟ್ಟ ಕಾಡಿನ ಒಂದ್ ಕೊಡಿ ಮಾತ್ರ. ಅತ್ತ ಆಚೆ ನೋಡ್ರೆ, ಬೇಂಗಮಲೆ, ಬಂಟಮಲೆ, ಕೊಡಗ್‌ನ ತಲಕಾವೇರಿ, ಪಟ್ಟಿ ದೂರ ದೂರದ ಆಚೆನ ಕುಮಾರ ಪರ್ವತ ಅದೆಲ್ಲಾ ಎಂತಾ ಪ್ರಕೃತಿನ ಸಮೃದ್ಧಿ ನಾಡ್‌ಗ. ನಾವು ಕಾಡ್‌ಂದ ಕರಿದು ಕಾಡಲ್ಲ, ಅದೇ ನಾಡ್‌ಗ, ಅಲ್ಲಿನ ಪ್ರಾಣಿ ವೈವಿಧ್ಯಗ ಏನ್ ಎಂತದೆಲ್ಲಾ ಉಟ್ಟು. ನಾವೆಲ್ಲಿ ಒಳೊ, ಯಾರೂ ತಿಳ್ಕಂಡ್‌ತ್‌ಲೆ. ಎಲ್ಲದೂ ನಾವುಗೆನೇ ಇದ್ದದ್‌ಂತ ತಿಳ್ಕಂಡ್ ಅದರ ನಾಶ ಮಾಡ್ತಾ ಒಳೊ. ನಮ್ಮೆಲ್ಲಾ

ಹಕ್ಕ್‌ಗಳಿಗೆ ಅದ್ ಒಳಪಟ್ಟದ್‌ಂತ ತಿಳ್ದ್ ಅದರೆಲ್ಲಾ ಬಳ್ಸಿಕಂಡ್ ಒಳೊ. ಹಾಂಗಿದ್ದರೂ ಅಲ್ಲೇ ಹುಟ್ಟಿ ಅಲ್ಲೇ ಬೆಳ್ದವ ಅಂವ ಅಲ್ಲಿನ ಒಂದ್ ಭಾಗ. ಯಾವ ನವ್ಯತೆನ ಸೋಂಕೂ ಇಲ್ಲದೆ ಬೆಳ್ದ ಜನಂಗ ಹಾಂಗೆನೇ. ಅವ್ಕೆ ಹುಟ್ಟೇ ಕಾಡ್, ಬೊದ್ಕೇ ಕಾಡ್, ಸಾವೇ ಕಾಡ್, ಕಾಡ್ ಮಕ್ಕ ಅವು ಅವು ಅದರ ಉಪಯೋಗಿಸಿಕಂಬೊದು ವಾಣಿಜ್ಯ ದೃಷ್ಟಿಲಿ ಅಲ್ಲ; ಬೊದುಕುವ ದೃಷ್ಟಿಲಿ ಮಾತ್ರ. ಅದಂರ್ದ ಹೆಚ್ಚೇನೂ ಅವ್ಕೆ ಬೇಕಾದುಲೆ. ಕಟ್ಟಳೆ ಕಾಯಿದೆ ಸಾವಿರ ಹೇಳ್ದು ಆದರೆ ನಾರಾಯಣ ಅಥವಾ ಅಂತವರ ದೃಷ್ಟಿಲಿ ಅವು ಯಾರೂ ಕಳ್ಳರಲ್ಲ, ಕಾಕರಲ್ಲ. ತಲೆತಲೆಂದ ಬೆಳ್ದ್ ಬಂದ ಹಾಂಗೆ ಅವೆಲ್ಲಾ ಬೊದ್ಕಿವೆ. ಆ ಹಕ್ಕ್ ಅವ್ಕೆ ಇದ್ದದೇ. ಅಂತದ್ ತಪ್ಪಿಕಾಕನ ಆ ಜನಂಗ ನೀರ್‌ಂದ ತೆಗ್ದ ಮೀನ್‌ನಾಂಗೆ ಆದವೆ. ಅಂತವುಕೆ ಸರ್ಕಾರದ ಕಾನೂನು ಕಟ್ಟಳೆಗ ಯಾಕೆ ನಮ್ಮ ವಿರುದ್ದ ಉಟ್ಟೂಂತ ಕಂಡದೆ. ಆದರೆ ಕಾನೂನುಗಳಿಗೆ ಕಾನೂನು ಮಾಡ್ದವ್ಕೆ ಈ ಜನಂಗ ಯಾಕೆ ಹೀಂಗೆ ಇದ್ದವೇಂತ ಕಂಡದೆ.

ಹಾಂಗೇ ಬೆಳ್ದವ ನಾರಾಯಣ ಅವನ ಹೊಟ್ಟೆ ಬಟ್ಟೆಗೆ ಕಷ್ಟ ಆಕನ ಅಂವ ನೋಡ್ದು ಕಾಡ್‌ನತ್ತ. ಅದೊಂದು ಅಕ್ಷಯದಾಂಗೆ, ಅಲ್ಲಿ ಎಲ್ಲದಕ್ಕೂ ಪರಿಹಾರ ಇದ್ದದೆ. ಎಲ್ಲನೂ ಇದ್ದದೆ. ಉಂಬಕೆ ಅಕ್ಕಿ ಇಲ್ಲದಿದ್ದರೆ ನರೆ, ಗೆಂಡೆಗ ಇದ್ದವೆ. ಅದ್ ಇದ್‌ಂತ ಅಲ್ಲ ಎಲ್ಲಾ ಅಲ್ಲಿನೇ ಉಟ್ಟು. ಅದರ ಯಾರಿಗೆನೂ, ಯಾವುದಕ್ಕೆನೂ ಹಾನಿ ಆಗದಾಂಗೆ ಬಳಸಿಕಂಬೊದು ಅವ್ಕೆ ಗೊತ್ತಿದ್ದದೆ. ಈ ಭೂಮಿಲಿ ಬದ್ಕಿಕಂಡ್ ಬಂದ ಲಕ್ಷಾಂತರ ಜೀವಜಂತುಗಳೊಟ್ಟಿಗೆ ನಾವುನೂಂತ ಈಗ ಯಾರೋ ತಿಳ್ಕಂಡಿಲ್ಲೆ. ಆದರೆ ಕಾಡ್‌ನ ಮಕ್ಕ ಹಾಂಗಲ್ಲ. ಅವು ಕಲ್ತದ್ ಯಾರೋ ಹೇಳ್ದ ಪಾಠಗ ಅಲ್ಲ. ಅದ್ ಬರೇ ಬೊದ್ಕುವ ಪಾಠ. ಹಾಂಗೇ ರಾಮಣ್ಣ ಬಂಟ್ರ್ ಬೆತ್ತದ ಹೆಡೆಗೆ ಬೇಕೂಂತ ಕೇಳಿಕಾಕನ ಕಾಡ್‌ನ ಬೆತ್ತನ ನಂಬಿ ನಾರಾಯಣ ನಾ ಮಾಡಿಕೊಟ್ನೆ ಅಣ್ಣಾಂತ ಒಪ್ಪಿಕಂಡಿತ್ತ್.

ನಾರಾಯಣನ ಅಪ್ಪನ ಮನೆ ಬಟ್ಟಂಗಾಯಿಲಿ ಇದ್ದರೂ ಅವ್ಕೆ ಬಡ್ಡಡ್ಕಲಿನೂ ಪಿತ್ರಾರ್ಜಿತ ಆಸ್ತಿ ಇತ್ತ್. ಬಡ್ಡಡ್ಕದ ಮೂಲ ಹಕ್ಕ್‌ದಾರ್‌ಗಳಲಿ ಕುಡಕಲ್ಲ್‌ನವುಂತ ಹೇಳ್ರೆ, ಕುಡಕಲ್ಲ್ ದೇವಯ್ಯನವರ ಒಟ್ಟೊಟ್ಟಿಗೇ ಅವರ ಜಾಗೆನ ಕರೆಲಿ ಕೆಲವು ಎಕ್ರೆ ಜಾಗೆಗ ಅವರ್ದ್. ಹಾಂಗೇ ನಾರಾಯಣ ಅವನ ಅಣ್ಣತಮ್ಮಂದರ್ ಬಡ್ಡಡ್ಕಕ್ಕೆ ಬಂದರೆ ಬಾಬಣ್ಣಣ್ಣನ ಬೆಡಿ ಇರ್ತಿತ್ತ್. ಬಾಬಣ್ಣಣ್ಣಂಗೆ ನಾರಾಯಣನ ನಿಯತ್ತ್. ಬೆಡಿನ ಮೇಲಿನ ನಿಯಂತ್ರಣ ಎಲ್ಲಾ ಗೊತ್ತಿದ್ದ ಕಾರಣ ಅಂವ ಯಾಗ ಕೇಳ್ರೆನೂ ಅವಂಗೆ ಬೆಡಿ ಕೊಡ್ತಿದ್ದೊ. ಹಾಂಗೇ ನಾರಾಯಣಂಗೂ ಒಂದ್ ಅಭ್ಯಾಸ ಆಗಿ ಹೋಗಿತ್ತ್. ಅದ್ ಬೆಡಿ ಇಲ್ಲದೇ ಕಾಡ್‌ಗೆ ಹೇಂಗೆ ಹೋದೂಂತ ಒಂದ್ ಅಭ್ಯಾಸ.

ಅಂವ ಕಾಡ್‌ಗೆ ಸೊಪ್ಪುಗಾಗಲಿ ಸೌದೆಗಾಗಲಿ ಎಂತದ್‌ಕೇ ಹೋದರೂ ಬೆಡಿ ಹಿಡ್ಕಂಡೇ ಹೋವ ಅಭ್ಯಾಸ. ಅಂದ್‌ಸ ಹಾಂಗೇ ಆಗಿತ್ತ್. ಬಂಟ್ರ್ ಹೇಳ್ದ ಹೆಡಗೆ ಮಾಡಿಕೆ ಬೆತ್ತ ಕಡ್ಯಕೆ ಹೋಕನ ಬೆಡಿನೂ ಇದ್ದರೆ ಒಳ್ಳೆದೂಂತ ಕಂಡಿತ್ತ್. ಹಾಂಗೇ ಅಂವ ಬಡ್ಡಡ್ಕ ದೊಡ್ಡ ಮನೆಗೆ ಬೊಳ್ಪುಗೇ ಬಂದ್ ಕಾಡ್‌ಗೆ ಹೋನೇಂತ ಹೇಳಿ ಬೆಡಿ ಕೇಳಿ ತೆಕಂಡ್ ಹೋಗಿತ್ತ್. ಹೋವ ಕಾರ್ಯ ಬೆತ್ತ ಕಡ್ಯಕೆ ಆದರೂ ಬೆಡಿ ಒಟ್ಟಿಗೇ ಇದ್ದರೆ ಸ್ವಾಮಿ ಕಾರ್ಯದ ಒಟ್ಟಿಗೆ ಸ್ವಕಾರ್ಯನೂ ಆದೂಂತ ಬೆಡಿ ತೆಕಂಡ್ ಹೋಗಿತ್ತ್. ಅವಂಗೆ ಬೆಡಿ ಕೊಡಿಕಾಕನನೇ ಬೆಡಿ ಕೊಟ್ಟ ಬಾಬಣ್ಣಣ್ಣ ನಾಲ್ಕ್ ಚಿಲ್ಲ್‌ನ ತೋಟೆ ಹೆಚ್ಚೇ ಕೊಟ್ಟು ಹೇಳಿದ್ದೊ, ಗುಳ್ಳುಮ್ಮೆ ಇದ್ದರೆ ನಾಲ್ಕ್ ಹೊಡ್ಡ್‌ತಾಂತ. ಹಾಂಗೆ ಅಂದ್ ಬಡ್ಡಡ್ಕಂದ ಬೆಡಿ ತೆಕಂಡ್ ಕಾಡ್‌ಗೆ ಹೊರ್ಟತ್ ಅಂವ.

ಒಮ್ಮೆ ಕೈಗೆ ಬೆಡಿ ಸಿಕ್ಕರೆ ಎಲ್ಲನೂ ಮರಿವಂತವ ಅಂವ ಬೆಡಿ, ತೋಟೆ ಕೈಲಿ ಇರಿಕಾಕನ ಅಂವ ಒಪ್ಪಿಕಂಡ ಕೆಲ್ಸ, ಬೆತ್ತ, ಹೆಡಗೆ, ಇದಂರ್ದಳೂ ಬೇಟೆನೇ ಮುಖ್ಯ ಅಂಗಿ ಕಂಡಿತ್ತ್ ಅವಂಗೆ. ಅಲ್ಲದೆ ಬಡ್ಡಡ್ಕ ಅಣ್ಣ ಗುಳ್ಳುಮ್ಮೆ ಹೊಡ್ಡ್ ತಾಂತ ಹೇಳ್ದ ಮೇಲೆ, ಬೆತ್ತ ಕಡಿದರ್‌ಂದಳೂ ಗುಳ್ಳುಮ್ಮೆ ಹೊಡಿದೇ ಮುಖ್ಯ ಕೆಲ್ಸಾಂತ ತಿಳ್ಕಂಡ್ ಕಾಡ್ ಹತ್ತಿತ್ತ್. ರಂಗತ್ತಮಲೆ ಕರೇಲಿ ಆಗಿ ದೊಡ್ಡ ಬೀಟೆ ಮರದ ಪುಡೇಲಿ ನಡ್ಡ್ ಆನೆ ಕಳ್ಪು ದಾಟಿ ಮೇಲೆ ಗುಡ್ಡೆ ಹತ್ತಿಕಾಕನ ಅತ್ತ ಇತ್ತ ಹೊಟ್ಟಂಗ ಅವನ ನೋಡಿ ನೆಗಾಡ್ದಾಂಗೆ ಹಾಂಕ್, ಹಾಂಕ್, ಹ್ಹೆ.. ಹ್ಹೇ... ಹ್ಹೇ..ಂತ ಅಟ್ಟಹಾಸಲಿ ಮರ್ಟ್‌ಕಂಡಿದ್ದೊ. ಅದ್ ಯಾವ್ದೂ ಕೇಳದಾಂಗೆ, ಕೇಳಿಕಂಡ್ ನಡ್ಡ್ ಬೋಳ್ ಮಾಣಿ ತಲ್ಪಿತ್ತ್. ಅಲ್ಲಿ ಸೊಲ್ಪ ಬೊಚ್ಚೇಲ್ ತೆಕಂಬಕೆ ಕುದ್ದ್ ಒಂದ್ ಬೀಡಿ ಎಳ್ದ್, ಒಂದ್ ಈಡ್ ಎಲಡ್ಕೆ ತಿಂದವ ಬೋಳ್ ಮಾನಿಲಿ ನಿತ್ತ್ ಸುತ್ತ ನೋಡ್ತ್. ಎಂಥಾ ಅದ್ಭುತ ನೋಟ ಅದ್. ದೂರ ತುಂಬಾ ದೂರದಾಚೆ, ಒಂದರ ಹಿಂದೆ ಒಂದ್ ನಾ ಹೆಚ್ಚ್, ನಾ ಹೆಚ್ಚ್‌ಂತ ಹೇಳುವ ಗುಡ್ಡೆಗಳ ಸಾಲ್. ಎಂತಾ ಪ್ರಕೃತಿನ ವೈಭವ ನೋಟ. ಅದೇ ದಾರಿಲಿ ಎಷ್ಟೋ ನೂರ್ ಸರ್ತಿ ಬಡ್ಡಡ್ಕಂದ ಬಟ್ಟಂಗಾಯಿ, ಬಟ್ಟಂಗಾಯಿಂದ ಬಡ್ಡಡ್ಕಕೆ ನಡ್ಡಿದ್ದ್. ಅಲ್ಲಿ ದಾಟಿಕಾಕನ ಒಮ್ಮೆ ಸುಮ್ಮನೆ ನಿತ್ತ್ ಹಾಂಗೆ ನೋಡ್ದು ಅವಂಗೆ ಅಭ್ಯಾಸ ಆಗಿ ಹೋಗಿತ್ತ್. ಎಲ್ಲಾ ಕಷ್ಟಕಾರ್ಪಣ್ಯದ ನಡುಲಿ, ಬೇಟೆನ ಕ್ರೂರ ಮನಸ್ಸ್‌ನ ಒಳಗೆ, ಅವಂಗೇ ತಿಳಿಯದಂತ ಪ್ರಕೃತಿನ ಸವಿನ ಅನುಭವಿಸುವಂತ ಅವಂಗೆ ಗೊತ್ತಿಲ್ಲದ ಕವಿ ಹೃದಯ ಅವನ ಮುಗ್ಧ ಮನಸ್ಸ್‌ನೊಳಗಿತ್ತ್. ಎಷ್ಟೋ ಹೊತ್ತ್ ಹಾಂಗೆ ನೋಡಿಕಂಡ್ ಇತ್ತ್. ದೂರಲಿ ಎಲ್ಲಿಯೋ ಒಂದ್ ಮುಚ್ಚ ಅವನ ನೋಟಕ್ಕೆ ಅಡ್ಡಿ ಅವಾಂಗೆ ಭೂಂಕ್, ಭೂಂಕ್‌ಂತ ಮರ್ಟತ್. ಒಮ್ಮೆನೇ ಎಚ್ಚರ ಅದಾಂಗೆ ಆದ ಅಂವ

ನೆಲಲಿ ಹಿಸಿದ್ದ ಬೆಡಿ, ಬೆಡಿಚೀಲ ತೆಕಂಡ್ ಮುಂದೆ ಹೊರ್ಟ್. ದಾರಿಲಿ ನಡ್ಯಕನ ಹಂದಿದಾಟಿದ ಹೆಜ್ಜೆಗುರ್ತ್, ಕಡೆ ದಾಟುವ ಕಡಾವು ಎಲ್ಲದರನೂ ಸೂಕ್ಷ್ಮಲಿ ನೋಡಿಕಂಡೇ ನಡ್ಯತಿತ್. ಜರ್ದಮಾನಿಂದ ಸ್ವಲ್ಪ ಈಚೆಗೆ ಹುಲಿ ಕೇರಿ ಬೊಡ್ದದೂ ಕಂಡತ್. ಅದರ್ನೇ ಸೂಕ್ಷ್ಮಲಿ ನೋಡ್ದವಂಗೆ ಮೈ ಅಕ್ಕಿ ಹೊಡ್ದಿತ್. ಅವನ ಅನುಭವಕ್ಕೆ ಗೊತ್ತಾದಾಂಗೆ ಕಳ್ದ ರಾತ್ರಿ ಹುಲಿ ಅಲ್ಲಿ ದಾಟಿತ್. ಹುಲಿ ಒಂದ್ ಹೊಡ್ದವ ಆದರುನೂ ಮೈ ಅಕ್ಕಿ ಹೊಡ್ದಿತ್. ಬೆಡಿನ ಹಿಡ್ದ ಕೈ ಅದರ ಇನ್ನೂ ಗಟ್ಟಿ ಹಿಡ್ದಿತ್. ಕಾಡ್‌ಲಿ ಅನುಭವ ನೂರಿದ್ದರೆನೂ ಕಲಿದು ಸಾವಿರ ಸಾವಿರ ಇದ್ದದೆ. ಅದ್ ಅವಂಗೆ ಗೊತ್ತಿತ್. ಮನ್ಸ್ ಹೆದ್‌ರ್‌ತ್ಲೆ ಅಂದರೂ ಒಮ್ಮೆ ಸೂಕ್ಷ್ಮಲಿ ಸುತ್ತೊಳೂ ತಿರ್ಗಿ ನೋಡ್ತ್. ಅವನ ಜಾಗ್ರತೆ ಅವಂಗಿದ್ದರೆ ತಪ್ಪಿಲ್ಲೆ ತಾನೆ. ಇನ್ನ್ ಮುಂದೆನ ಹೆಜ್ಜೆಗೆ ಅವನ ಪಾದಗಳೂ ಕಣ್ಣಾಗಿದ್ದೊ. ಅಂವ ಈಗ ಹಿಸುವ ಹೆಜ್ಜೆ ಹೆಜ್ಜೆಗಳಲಿನೂ ಸೂಕ್ಷ್ಮತೆ ಇತ್. ಅವನ ಕೆಬಿಗೆ ಕೇಳುವ ಸಣ್ಣ ಸಣ್ಣ ಸದ್ದ್‌ಗಳಿಗೆನೂ ಅಂವ ಅರ್ಥ ಹುಡ್ಕ್‌ತಿತ್. ಅರ್ಥ ಮಾಡಿಕಣ್‌ತಿತ್. ಒಟ್ಟ್‌ಲಿ ಅವನಲ್ಲಿದ್ದ ಬೇಟೆಗಾರ ಜೀವಂತಿಕೆ ಪಡ್ದಿತ್.

ಜರ್ದಮಾನಿಂತ ಹೇಳ್ರೆ ಅದ್ ಒಂದ್ ದೊಡ್ಡ ಗಿರಿಶ್ರೇಣಿ ಸಮಾಪಾಲ್ ಮಾಡ್ದಾಂಗೆ ಜರ್ದ್‌ಹೋದ ಜಾಗೆ. ಅದ್ ಯಾಕೆ ಹಾಂಗೆ ಜರ್ತೋ ಗೊತ್ತಿಲೆ. ಯಾಗ ಜಾರ್ತೋ ಗೊತ್ತಿಲೆ. ಅಂದರೂ ಅದರ ನೋಡಿಕಾಕನ ಸಾಮಾನ್ಯ ಜ್ಞಾನಕ್ಕೆ ಅದ್ ಒಂದ್ ನೂರ್ ವರ್ಷದ ಒಳಗೇ ಜರ್ದಿರ್ದುಂತ ಕಂಡದೆ. ಜರ್ದ ಮೊಣ್ಣನ ಮೇಲೆ ಮತ್ತೆ ಬೆಳ್ದ ಮರಗ ಆ ಅಂದಾಜ್‌ನ ಕೊಟ್ಟವೆ. ಒಂದ್ ಅತ್ತ ಇತ್ತ ತಗ್ಗಾಗಿರುವ ಗಿರಿ ಶ್ರೇಣಿಲಿ ನಡೂಲಿ ಒಂದ್ ಜರ್ದ್ ಹೋಗಿ ಆಕನ ಒಂದ್ ಸಂಪರ್ಕ ಸೇತುವೆ ಕಡ್ದ್ ಹೋದಾಂಗೆ ಆಗಿದ್ದದೆ. ಅಂತದೇ ಪರಿಸ್ಥಿತಿ ಅಲ್ಲಿ ನಿಸರ್ಗ ನಿರ್ಮಿಸಿತ್. ಜರ್ದ್ ಉಳ್ದ ಗುಡ್ಡೆನ ಮೇಲೆ ನಡ್ದ್ ಆಚೆ ದಾಟುದು ಸುಲಭದ ಮಾತಲ್ಲ. ಆದರೆ ಗುಡ್ಡೆನ ಬಲ್ದ ಪುಡೆಲಿ ಒಂದ್ ಸಣ್ಣ ಕಾಲ್ದಾರಿ ಇತ್. ಅದ್ ಅದೇ ಆಗಿ ಇದ್ದ ಕಾಲ್ದಾರಿನೋ, ಅಲ್ಲ ಪ್ರಾಣಿಗ ಅಲ್ಲಿ ನಡ್ದ್ ಆದ್ದೋ ಗೊತ್ತಿಲೆ. ಅಂತೂ ಅದ್ ಈಚೆ ಗುಡ್ಡೆಂದ ಆಚೆ ಕರೆಗೆ ದಾಟಿಕೆ ಸಾಧ್ಯ ಇರುವ ಸುಲಭದ ಮತ್ತೆ ಹಕ್ಕಲೆನ ದಾರಿ ಆಗಿತ್. ಅದೆಂತಾ ದಾರಿ..... ಹೆಚ್ಚ್‌ಂತ ಹೇಳ್ರೆ ಕೆಲವೇ ಕಡೆಲಿ ಒಂದೆರ್ಡ್ ಅಡಿ ಅಗಲ ಇರ್ದು ಅಷ್ಟೆಮಾತ್ರ, ಅದರ ಕೆಳಗೆ ಸುಮಾರ್ ನೂರಾರ್ ಅಡಿ ಆಳದ ಅರಣ್ಯ ತುಂಬಿದ ಪ್ರಪಾತ. ಆ ದಾರಿ ಸುಮಾರ್ ಒಂದ್ ಪರ್ಲಾಂಗ್ ಉದ್ದ. ಕಣ್ಣ್‌ಲಿ ಕಣ್ಣ್ ಹಿಸಿ ಹೆಜ್ಜೆ ಮೇಲೆ ಹೆಜ್ಜೆ ಹಿಸಿ ನಡಿವಂತಾ ದಾರಿ. ಸಣ್ಣ ತಪ್ಪುಸಾ ಒಂದ್ ಜೀವನನೇ ಬಲಿತೆಕಂಬಂತಾ ದಾರಿ. ಆದರೆ ಎಷ್ಟ್ ಆಶ್ಚರ್ಯಂತ ಹೇಳ್ರೆ, ದೂರ ತುಂಬಾ ದೂರದ ನಾಗರ ಹೊಳೆ, ತಿತಿಮತಿ

ಕಡೆಂದ ಪ್ರತಿವರ್ಷ ಆನೆಗ, ಆನೆಗಳ ಹಿಂಡ್ ಆಹಾರನ ಅರಸಿಕಂಡ್ ತತ್ಕಾಲಕ್ಕೆ ಇತ್ತ ವಲಸೆ ಬಂದವೆ. ಅವು ಸಹಾ ದಾಟುದು ಇದೇ ದಾರಿಲಿ. ನಿಜಕ್ಕೂ ನಂಬಿಕೇ ಆದುಲೆ ಆದರೂ ಅವು ಅವರ ಆ ಬೃಹದಾದ ದೇಹನ ಹೊತ್ತ್‌ಕಂಡೇ ಅತ್ಯಂತ ಸೂಕ್ಷ್ಮಲಿ ಅಲ್ಲಿ ದಾಟಿವೆ. ಅಲ್ಲಿ ನಡ್ಯಕನ ನಿತ್ಯ ಅಲ್ಲಿ ನಡ್ಯವುಕೇ ಮೈ ಜುಂ ಹೇಳ್ದೆ. ಈಗ ಅದರ ಜಾಗ್ರತೆಲಿ ದಾಟಿ ನಾರಾಯಣ ಮುಂದೆ ಹೋಗಿತ್ತ್. ಅದರ ಆಚೆಗೆ ಇರುದೇ ಬೆಳಿಂದ್ರ್ ತಟ್ಟ್. ಬೆಳಿಂದ್ರ್ ತಟ್ಟ್‌ಂತ ಹೇಳ್ರೆ ಅಲ್ಲೊಂದು ಭಾರೀ ದೊಡ್ಡ ಬೆಳಿಂದ್ರ್ ಮರ ಉಟ್ಟು. ಹಾಂಗಾಗಿ ಆ ತಟ್ಟ್‌ನ ಬೆಳಿಂದ್ರ್ ತಟ್ಟ್‌ಂತ ಹೇಳಿವೆ. ಬೇಟೆಗೆ ಸೇರವು ಎಲ್ಲಾ ಒಂದ್ ಗುರ್ತ್‌ನ ಜಾಗೆ ಆಗಿ ಆದರ್ನೆ ಹಿಸಿಕಂಡವೆ ಯಾಕೇಂತ ಹೇಳ್ರೆ ಅಲ್ಲಿಂದ ಮುಂದೆನ ಕಾಡೇ ಚೋನಪ್ಪಾಡಿ. ಸೀದಾ ಹೋದರೆ ಚೋನಪ್ಪಾಡಿ, ಎಡಕ್ಕೆ ಇಳ್ದರೆ ಬಟ್ಟಂಗಾಯಿ ಸೀದಾ ಚೋನಾಪ್ಪಾಡಿ ದಾಟಿ ಹೋದರೆ ಚೆರ್ನೂರು ಅಲ್ಲಿ ಮುಂದೆ ಹೋಗಿ ಬಲಕ್ಕೆ ತಿರ್ಗಿರೆ ಕೊಚ್ಚಿ ಸೀದಾ ನಡ್ದರೆ ಕಣಕ್ಕೂರು. ಒಂದ್ ಕಾಡ್‌ನ ವೈಭವದ ರಾಜ್ಯ ಅದ್. ಅಲ್ಲಿ ಏನುಟ್ಟೂಂತ ಕೇಳುದರ್‌ಂದ ಅಲ್ಲಿ ಏನಿಲ್ಲೆಂತ ಕೇಳ್ರೆ ಹೇಳಿಕೆ ಸುಲಭ ಅದರ ನಡುಲಿ ಕೈಲಿ ಬೆಡಿ ಹಿಡ್ದ್ ನಡ್ಯತಿತ್ತ್ ನಾರಾಯಣ. ಅಲ್ಲೊಂದು ದೊಡ್ಡ ಮರ ಅದರ ಕೊಡಿ ತುಂಬಾ ಹಣ್ಣ್‌ಗ. ಅದರ ಕೊಡಿಂದ ಕೇಳ್ತಿತ್ತ್ ಗೂಂಕ್, ಗೂಂ....ಕ್ ಗುಳ್ಳುಮ್ಮೆಗಳ ಹೊಟ್ಟೆ ತುಂಬಿದ ಸಂತೋಷದ ಗೂಂಕಾರ. ಮರದ ಕೊಡಿಲಿ ಹಣ್ಣ್‌ಗೆ ಕೊಕ್ಕ್ ಹಾಕಿಕಂಡ್ ಇತ್ತ್ ಒಂದ್ ಹಕ್ಕಿ. ಗುಳ್ಳುಮ್ಮೆಂತ ಹೇಳ್ರೆ ಅದ್ ಒಂದ್ ಜಾತಿನ ಪಾರಿವಾಳ. ಪಶ್ಚಿಮ ಘಟ್ಟಲಿ ಪಾರಿವಾಳದ ಜಾತಿಲಿ ಅದ್ ಅತ್ಯಂತ ದೊಡ್ಡ ಹಕ್ಕಿ, ಮಲೆನಾಡ್ ಘಟ್ಟದ ನಡುನ ಕಾಡ್‌ಲಿ ಅದರ ಭೂತ್ ಸೋರೆಂತ ಕರ್ದವೆ. ಅಂತಾ ಹಕ್ಕಿ ಅದರ ಹೊಟ್ಟೆಗಾಗಿ ಹಣ್ಣ್‌ನ ತಿಂಬಕನ ಕುತ್ತ ಗುರಿನೋಡಿ ಗುಂಡ್ ಹೊಡ್ತ್ ನಾರಾಯಣ. ಅವನ ಗುರಿ ತಪ್ಪಿತ್ಲೆ ಪೆಟ್ಟ್ ಬಿದ್ದ ಹಕ್ಕಿ ಪೆಟ್ಟ್‌ನ ಮರ್ಕಕ್ಕೆ ರೆಕ್ಕೆ ನೀಂಡಿತ್ತ್ ಅಷ್ಟೆ. ಅದರ ಶಕ್ತಿ ಬಿದ್ದ್ ಹೋಗಿತ್ತ್. ಅದೀಗ ಮರದ ಕೆಳಗೆ ಬಿದ್ದ್‌ಕಂಡ್ ಇತ್ತ್. ರೆಕ್ಕೆ ನೀಂಡಿ ಬಿದ್ದ ಹಕ್ಕಿ ಗಾಳಿಲಿ ತೇಲ್ದಾಂಗೆ ಆಕಂಡ್ ಮರಂದ ಸುಮಾರ್ ಆಚೆಗೆ ಬಿದ್ದಿತ್ತ್. ಇನ್ನ್ ಅದರ ತರೋಮೋಂತ ಆ ಜರಿಲಿ ಇಳ್ದ್ ಹುಡ್ಕ್‌ತಿತ್ತ್. ಅಷ್ಟೊತ್ತಿಗೆ ಆ ಘಟನೆ ನಡ್ದಿತ್ತ್. ಏಯ್‌ಂತ ಯಾರೋ ಕರ್ದಾಂಗೆ ಆಗಿ ಮೇಲೆ ನೋಡ್ತ್. ಒಮ್ಮನೇ ಅವನ ಪೆರ್‌ಜೀವ ರಟ್ಟಿದಾಂಗೆ ಆಗಿತ್ತ್. ಕಾಡ್‌ಲಿ ಎಂತದಕ್ಕೂ ಹೆದ್ರದಿದ್ದವ ಈಗ ಹೆದ್ರಿ ನಡ್ಗಿ ಹೋಗಿತ್ತ್. ಅಲ್ಲಿ ನಿತ್ತಿದ್ದೊ ಒಬ್ಬ ಗಾರ್ಡ್ ಮತ್ತೆ ಒಬ್ಬ ಪಾರೆಸ್ಟರ್. ಓಯ್ ಬಾಯ. ಎಂತದಕ್ಕೆ ಗುಂಡ್ ಹೊಡ್ದದ್? ಗಾರ್ಡ್ ಜೋರ್‌ಲಿ ಕೇಳ್ತ್. ಅಂತಾ ಸಮಯಲಿನೂ ಅವನ ತಲೆಗೆ ಒಂದ್ ಒಳ್ಳೆ ಯೋಚನೆ ಬಂದಿತ್ತ್. ಆ ಕ್ಷಣ

ಅಂವ ಅದರ ಪ್ರಯೋಗಿಸಿತ್ತ್. ಅಂವ ಅವರಿಬ್ಬರ ಕಡೆಗೆ ನೋಡಿ ಬಾಯಿಗೆ ಬೆರ್ಳ್ ಒಸಿ ಸುಮ್ಮನಿರೀಂತ ಸಂಜ್ಞೆ ಮಾಡಿ ಮತ್ತೆ ಅವರತ್ತ ಗಮನವೇ ಇಲ್ಲದ ರೀತಿಲಿ ಯಾವುದೋ ಪೆಟ್ಟಾದ ಪ್ರಾಣಿನ ಒಂದೆ ಸಾರಿಕಂಡ್ ಹೋವರಾಂಗೆ ಬೆಡಿನ ಮುಂದೆ ಮಾಡಿ ನಾಲ್ಕ್ ಹೆಜ್ಜೆ ಅಡ್ಡ ನಡ್ದ್ ಅಲ್ಲಿಂದ ಕುತ್ತ ಕೆಳಗಿಳ್ತ್. ಅದೊಂದು ದೊಡ್ಡ ಜರಿ. ಅಲ್ಲಿ ಅವನಂತವುಕೆ ಅಲ್ಲದೆ ಬೇರೆಯವುಕೆ ಇಳಿಯಕೆ ಕಷ್ಟನೇ. ಫಾರೆಸ್ಟರ್‌ನವರ ಕಣ್ಣ್‌ಗೆ ಕಾಣದಾಂಗೆ ಆದ ಕೂಡ್ಲೆ ಸುಮಾರ್ ಕೆಳಗೆ ಇಳ್ದ್ ಅಲ್ಲಿಂದ ಅಡ್ಡಕ್ಕೆ ನಡ್ಯಕೆ ಸುರ್ ಮಾಡ್ತ್. ಈಗ ಅವಂಗೆ ಗೇರೆಂಟಿ ಗೊತ್ತಿತ್ತ್. ಪೋರೆಸ್ಟ್ರ ಅಲ್ಲ, ಅವರ ಅಪ್ಪಂಗೂನೂ ಇನ್ನ್ ಸಿಕ್ಕಿಕಿಲೇಂತ. ಇತ್ತ ಕಾಡ್‌ಲಿ ನಿತ್ತಕಂಡ ಪಾರೆಸ್ಟ್ರ, ಗಾರ್ಡ್‌ಗ, ಸುಮಾರ್ ಹೊತ್ತ್ ಈಗ ಗುಂಡ್ ಕೇಳ್ದು, ಮತ್ತೆ ಕೇಳ್ದೂಂತ ಕಾದ್‌ಕಂಡಿದ್ದೊ. ಹೇಂಗಿದ್ದರೂ ಕೆಂಪನೋ, ಹಂದಿನೋ ಸಿಕ್ಕುದೂಂತ ಅವು ಬಾರಿ ಕುಸಿಲೇ ಸುಮಾರ್ ಹೊತ್ತ್ ಕುದ್ದೊ. ಬಾಯಿತುಂಬ ಎಲಡ್ಕೆ ತುಂಬ್ಸಿ ತಿಂದ್‌ಕಂಡಿರಿಕನ ಗಾರ್ಡ್‌ಂಗೆ ಸಂಶಯ ಬಾತ್. "ಅಣ್ಣ ಅಂವ ನಾವ್ಗೆ ಕೈಕೊಟ್ಟತೋಂತ" ಅದ್ ಅರ್ಥ ಆದ ಫೋರೆಸ್ಟ್ರ್‌ಗೆ ಪಿತ್ತ ನೆತ್ತಿಗೇರಿತ್ತ್. ಇನ್ನೊಮ್ಮೆ ಸಿಕ್ಕಲಿ ಬೋಳಿಮಂಜಂಗೆ ಮಾಡುವ ಬಗೆ ಉಟ್ಟೂಂತ ಅವನ ಬೊಯ್ಕಂಡ್ ಅಲ್ಲಿಂದ ಹೊರ್‍ಟೊ. ಅವ್ಕೆ ಇಬ್ಬರಿಗೂ ನಾರಾಯಣ ಯಾರ್‌ಂತ ಗೊತ್ತಿಲ್ಲೆ. ಆದರೆ ಕಂಡ್ ಗೊತ್ತಿತ್ತ್. ನಾರಾಯಣಂಗೆ ಮಾತ್ರ ಅವರ ಇಬ್ಬರನೂ ಜಾಸ್ತಿ ಪರಿಚಯ ಇತ್ಲೆ. ಆದರೆ ಬಟ್ಟಂಗಾಯಿಲಿ ಇರುವುಂತ ಗೊತ್ತಿತ್ತ್. ಇದ್ ಕಳ್ದ್ ಒಂದ್ ವಾರ ಆದರೂ ಅತ್ತ ಕಾಡ್‌ಕಡೆಗೆ ತಲೆನೂ ಹಾಕಿ ಮಲ್ಗಿತ್ಲೆ. ಇತ್ತ ಬೇರೆ ಕಾಡ್‌ಂದ ಬೆತ್ತ ಕಡ್ದ್ ತಂದ್ ಬಂಟ್ರ್‌ಗೆ ಹೆಡಗೆ ಮಾಡಿ ಕೊಟ್ಟಿತ್ತ್. ಮನೆಲಿರಿಕಾಕನನೂ ಹೆಣ್ಣ್‌ನ ಹಕ್ಕಲೆ ಹೇಳಿ ಒಸಿತ್ತ್. ಯಾರಾರ್ ಫೋರೆಸ್ಟ್ರನವು ಬಂದ್ ಕೇಳ್ರೆ ಇಲ್ಲೇಂತ ಹೇಳಿಕೆ. ಹೀಂಗೆ ಒಂದ್ ರೀತಿನ ಹೆದ್ರಿಕೆಲಿ ಭೂಗತ ರೀತಿಲಿ ಬೊದ್ಕ್‌ತಾ ಒಳೇಂತ ಅಂವ ತಿಳ್ಕಂಡಿತ್ತ್. ಹೀಂಗೆ ಹೆದ್ರಿಕಂಡ್ ಇರಿಕೆ ಆದುಲೆ ಕುಞ್ಞಣ್ಣನ ಹಕ್ಕಲೆ ಹೇಳಿ ಅದರೊಮ್ಮೆ ಸರಿಮಾಡಿಕೊಡಿಕೆಂತ ಕೇಳಿಕೆ ಅಂದ್ ಆಲೆಟ್ಟಿಗೆ ಬಂದದ್. ಅಲ್ಲಿ ಆಗ ಭುಜಂಗ ಗಾರ್ಡ್‌ನ ಕಂಡ್ ಅಕ್ಕಿ ಚೀಲದ ಒಂದೆ ಅಡಂಗಿದ್.

ನಾರಾಯಣನ ಕತೆ ಕೇಳಿ ಕುಞ್ಞಣ್ಣಂಗೆ ನೆಗೆ ತಡಿಯಕೆ ಆತಿಲ್ಲೆ. ಅಂದರೂ ಮೋರೆಲಿ ತೋರ್‍ಸಿಕಣದೇ "ಅಂದರೆ ನಿಂಗೆ ಆರ್ ತಿಂಗ ಜೈಲ್ ಅದು ಮಾರಾಯಾ"ಂತ ಹೇಳಿಕನ ಅಂವ ಹೆದ್ರಿ ನಡುವಷ್ಟ್ ಆಗಿತ್ತ್. ದಮ್ಮಯ್ಯಣ್ಣ ಹೇಂಗಾರ್ ನನ್ನ ಬುಡ್ಸಿಂತ ಮತ್ತೆ ದಮ್ಮಯ್ಯ ಹಾಕಿತ್ತ್. ಆದು ಮಾರಾಯ ನಾ ಎಲ್ಲ ಸರಿಮಾಡ್ನೆಂತ ಕುಞ್ಞಣ್ಣ ಹೇಳ್ದ ಮೇಲೆನೇ ನಾರಾಯಣಂಗೆ ಧೈರ್ಯ ಬಂದದ್. ಮತ್ತೂ ಅಲ್ಲೇ ನಿತ್ತ್‌ಕಂಡ್ ಇದ್ದವ ಬಸ್ಸಗೆನೂ ದುಡ್ಡ್ ಇಲ್ಲೆ ಅಣ್ಣಾಂತ ನಂರ್‍ಗಿತ್.

ಐವತ್ತ್ ರೂಪಾಯಿ ಕೊಟ್ಟ ತಕ್ಷಣ ನಾ ಇನ್ನ್ ಬನ್ನೆ ಅಣ್ಣಂತ ಹೇಳಿ ಬಸ್‌ನನೂ ಕಾಯದೆ ಬಡ್ಡಡ್ಕ ಕಡೆಗೆ ನಡ್ತ್. ನಡ್ಯಕನನೂ ಭುಜಂಗ ಹೋದ ದಿಕ್ಕ್‌ನ ಕಡೆ ಜಾಗ್ರತೆಲೇ ನೋಡಿಕಂಡ್ ಹೋತ್ ಎಲ್ಯಾರ್ ಅಣ್ಣ ಹೇಳಿಕೆ ಮುಂದೆ ಅಂವ ಹಿಡ್ದ್ ಬುಟ್ಟರೇಂತ ಅವನ ಜಾಗ್ರತೆಲಿ ಅಂವ ಇತ್ತ್. ನಾರಾಯಣ ಹೋದ ಮೇಲೆ ಕುಞ್ಞಣ್ಣ ಹೀಂಗೇ ಸುಮ್ಮನೆ ಯೋಚನೆ ಮಾಡಿಕಂಡ್ ಕುದ್ದತ್.

ಕುಞ್ಞಣ್ಣನ ಆ ದಿನಗ ಈಗ ಕಳ್ಡ್ ಹೋಗಿತ್ತ್. ಆಲೆಟ್ಟಿನ ಅಂಗಡಿ ಬುಟ್ಟ್ ದೂರದ ಊರ್‌ಗೆ ಸೇರಿ ಹೋಗಿತ್ತ್. ಉತ್ತರ ಕನ್ನಡ ಜಿಲ್ಲೆನ ಒಂದ್ ತುತ್ತ ತುದಿಗೆ ದಾಟಿ ಸೇರಿತ್ತ್. ಅದ್ ಸೂಫಾ ತಾಲ್ಲೂಕ್‌ನ ಕೇಲಾಪಾನಿಂತ ಹೇಳುವ ಜಾಗೆ. ಸೂಫಾಂತ ಹೇಳುವ ಜಾಗೆ ತಾಲ್ಲೂಕ್ ಈಗ ಇಲ್ಲೆ, ಯಾಕೇಂತ ಹೇಳ್ರೆ ಆ ಸೂಫಾ ಕಾಳೀ ನದಿಗೆ ಗಣೇಶ ಗುಡಿಲಿ ಕಟ್ಟಿದ ಅಣೆಕಟ್ಟ್‌ಲಿ ಮುಳ್ಗಿ ಹೋಗಿತ್ತ್. ಅದೇ ಸೂಫಾ ಪೇಟೆಗೆ ಇಳಿವ ಡಾಮರ್ ರಸ್ತೆ ಕರೆನ ಒಂದ್ ಜಾಗೆ ಕೇಲಪಾನಿ. ಗಣೇಶ ಗುಡಿಂದ, ಜಗಲ್‌ಬೇಜ್‌ಂತ ಹೇಳುವ ಜಾಗೆಗೆ ಹೋಕನ ನಡುನ ಜಾಗೆ ಅದ್. ಅಲ್ಲಿ ಏನೂ ಇಲ್ಲೆ. ಆ ಜಾಗೆ ಮ್ಯಾಂಗನೀಸ್ ಮತ್ತೆ ಕಬ್ಬಿಣದ ಅದಿರ್ ಸಿಕ್ಕುವ ದಟ್ಟ ಅರಣ್ಯದ ಒಂದ್ ಮಧ್ಯಭಾಗ. ಕಾಡ್‌ಲೇ ಹುಟ್ಟಿ ಕಾಡನನೇ ಕಂಡ್ ಬೆಳ್ದವ ಕುಞ್ಞಣ್ಣ. ಆದರೆ ಅವನ ಜೀವಿತ ಕಾಲಲೇ ಅಂತೊಂದ್ ಕಾಡ್‌ನ ಕಂಡಿತ್ಲೆ. ಯಾವ ಪೂಮಲೆ, ಯಾವ ಚೋನಪ್ಪಾಡಿ, ಯಾವ ಬೇಂಗಮಲೆ, ಬಂಟಮಲೆ, ಇವೆಲ್ಲನೂ ಧಾಂಡೇಲಿನ ಆ ಕಾಡ್‌ನ ನಡುಲಿ ಕುಞ್ಞಣ್ಣನಂತ ಕುಞ್ಞಣ್ಣಂಗೇ ತೀರ ಸಣ್ಣದಾಗಿ ಕಂಡಿತ್ತ್. ಆದ್ ಸಾಮಾನ್ಯ ಕಾಡ್ ಆಗಿತ್ಲೆ. ಕರ್ನಾಟಕ ರಾಜ್ಯದ ಅತ್ಯಂತ ದಟ್ಟ ಮಲೆ ಪ್ರದೇಶಗ ಆದ ಕೊಡಗ್, ಕನ್ನಡಜಿಲ್ಲೆ, ಚಿಕ್ಕಮಗಳೂರು, ಶಿವಮೊಗ್ಗ ಇವೆಲ್ಲ ದಟ್ಟಾರಣ್ಯಗಳ ಒಟ್ಟಿಗೆ ಸೇರ್ಸಿರೆ ಒಂದ್ ಕಾಂಬೊದು ಈ ದಟ್ಟ ಅಭಯಾರಣ್ಯ. ಅಲ್ಲಿ ಅಲ್ಲಿನ ಕಾಡ್‌ನ ನಡುಲಿ ಈಗ ಕುಞ್ಞಣ್ಣ ಒಬ್ಬ ಗಣೆಗಾರಿಕೆನ ಗುತ್ತಿಗೆದಾರ ಆಗಿತ್ತ್. ಎಲ್ಲಿಂದೆಲ್ಲಿಗೆ ಸಂಬಂಧ. ಎಲ್ಲಿಯೋ ಪ್ರಕೃತಿನ ಅಪ್ಪಿಕಂಡ್ ಬೆಳ್ದವ ಈಗ ಜೀವನಾಧಾರಕ್ಕಾಗಿ ಆ ಪ್ರಕೃತಿನ ನಡುಲೇ ಬದುಕ್‌ನ ಹೋರಾಟ ನಡ್ಸ್‌ತಿತ್ತ್. ಅಲ್ಲಿ ಅವಂಗೆ ಇಲ್ಲದ್ದ್ ಏನಿತ್ಲೆ. ಕಾಲಿಗೆ ಎಡ್ಗ್‌ವಂಗೆ ಕಾಡ್‌ಹಂದಿಗ, ಕಾಟಿಗ, ಹುಲಿಗ ತಿರ್ಗ್‌ತಿದ್ದೊ. ಅಂತದೊಂದ್ ಪ್ರದೇಶ ಉಟ್ಟೊಂತ ಯಾರ್ ಹೇಳ್ರೆನೂ ಅಂವ ನಂಬ್‌ತಿತ್ಲೆ. ಅಂತ ದಟ್ಟ ಕಾನನದಿ ನಡುಲಿ ಯಾವ ಆಯುಧನೂ ಇಲ್ಲದೇ ಅವೆಲ್ಲ ಪ್ರಾಣಿಗಳಿಗೆ ಸಹಜೀವಿಯಾಗಿ ಬದ್ಕುವ ಕಾಲ ಅದಾಗಿತ್ತ್. ಬಡ್ಡಡ್ಕ ಅಪ್ಪಯ್ಯಜ್ಜ, ರಾಮಯ್ಯಜ್ಜ, ಬಾಬಣ್ಣಣ್ಣ ಎಲ್ಲವೂ ಹುಡ್ಕಿಕಂಡ್ ತಿರ್ಗ್‌ತಿದ್ದ ಪ್ರಾಣಿಗಳ ಹಿಂಡೇ ಆ ಜಾಗೆಲಿ ಇತ್ತ್. ಬೆಡಿನ ಕೈಲಿ ಹಿಡಿಯದೇ ಒಂದ್ ರೀತಿಲಿ ಅವುಗಳ ನೋಡುವ ಸೌಭಾಗ್ಯ ಈಗ ಅವನೆದುರಿತ್ತ್.

ಇಡೀ ಭಾರತ ದೇಶಲೆ ಅಂತಾ ಒಂದ್ ಕಾಡ್ ಇರ್ದ್ದಂತಳೂ ಅವಂಗೆ ಗೊತ್ತಿತ್ಲೆ. ಅವನ ಮತ್ತೆ ಅವನ ದೋಸ್ತಿ ವಿಶ್ವ, ಅವನ ತಮ್ಮ ಕುಞ್ಞಣ್ಣಂಗೂ ತಮ್ಮನೇ ಆಗಿದ್ದ ಚಿನ್ನಣ್ಣ ಒಟ್ಟಿಗಿದ್ದೊ. ಬದುಕ್‌ನ ಒಂದ್ ವಿಹಂಗಮ ನೋಟಲಿ ಬದ್‌ಕ್‌ನ ನೋಡ್ತಿದ್ದೊ. ಅತ್ಯಂತ ದಟ್ಟ ಕಾಡ್‌ನ ನಡುಲಿ ಕಟ್ಟಿದ ಬೆದ್ರ್‌ತಟ್ಟಿಗೆ ಮಣ್ಣ್ ಪೂಜಿ ಕಟ್ಟಿದ ಹಂಚಿನ ಮಾಡ್‌ನ ಕೊಟೆಗೆಗಳ ತರದ ಕಟ್ಟಡಲಿ ವಾಸ ಆಗಿದ್ದೊ. ಸುತ್ತಳೂ ಗಣಿಗಾರಿಕೆ ಕೆಲಸ ಮಾಡುವ ಶ್ರಮ ಜೀವಿಗ ಕೆಲ್ಸದವು ಇದ್ದೊ. ಹೊತ್ತ್ ಕತ್ತಲೆ ಆಕನ ಅಲ್ಲಿ ಕರೆಂಟ್ ಬೊಳ್ಳಿತ್ಲೆ. ಫೋನ್ ಇತ್ಲೆ. ಹಿಂಬತ್ ಮುಟ್ಟ ಕೆಲ್ಸ ಮಾಡಿ ಬಂದ್ ಉಳಿದ ಸಣ್ಣ ಸಮಯಲಿ ಸಂಭ್ರಮಿಸುವ ಕೆಲ್ಸದವು ಇದ್ದೊ. ಎಲ್ಲಾ ಶ್ರೀಮಂತಿಕೆ, ಅಟ್ಟಹಾಸಗಳ ಒಂದ್ ಸಣ್ಣ ಶಬ್ದನೂ ಅಲ್ಲಿತ್ಲೆ. ಕತ್ತಲೆ ಕತ್ತಲೆ ಆದಾಂಗೆ ಮರ್ಡ್ವ ಹಕ್ಕಿಗ, ಕಾಡ್‌ಕೋಳಿ, ಚಕ್ಕಟೆಗ, ಮರದ ಮೇಲೆ ಮಲ್ಗಿಕೆ ಹೊರ್ಪ ಮುಚ್ಚಗಳ ಬೂಂಕ್ ಎಲ್ಲಿಯೋ ನಾ ಹೆಚ್ಚೋ ನೀ ಹೆಚ್ಚೋಂತ ಮರ್ಡುವ ಚೆಣಿಲ್‌ಗಳ ಶಬ್ದ ಮುಗ್ದರೆನೂ, ಮುಗಿಯದೇ ಇದ್ದ ಮಳೆಕರಿವ ಜೀರುಂಡೆ ಸದ್ದ್ ಎಲ್ಲ ಸುತ್ತಂದಳೂ ಕೇಳಿಕಂಡ್ ಇರಿಕಾಕನ ಎಲ್ಲಿಯೋ ಒಂದ್‌ಕಡೆ ಮರದ ಮೇಲೆಂದ ಅನುಭವಸ್ತ ಮುಚ್ಚ ಒಂದ್ ನಿಸ್ತೇಜ ಸ್ವರಲಿ ಹೆದ್ರಿ ಕೀರ್‌ಲಾಗಿ ಬೂ......ಕ್‌ಂತ ಹೇಳಿಕಾಕನ ಇಡೀ ಕಾಡೇ ನಿಶ್ಯಬ್ದ ಆಗಿ ಹೋಗ್ತಿತ್ತ್. ಅದೊಂದು ಸ್ವರ ಯಾವುದೋ ಒಂದ್ ಅಪಾಯದ ಸೂರ ಆಗಿತ್ತ್. ದೂರಲಿ ಎಲ್ಲಿನೋ ಗಂಟೆ ಹೊಡ್ದಾಂಗೆ ಮರ್ಸ್‌ಕಂಡ್ ಓಡುವ ಕಡೆನ ಸ್ವರ ದೂರ ದೂರ ಆಗ್ತಿತ್ತ್. ಆಗ ಕೇಳ್ತಿತ್ತ್ ಭೂಮಿನ ಒಳಗೆಲ್ಲೊ ಹೊರ್ಟ್ ಹೊರಗೆ ಬಾವ ಒಂದ್ ಗುಡ್‌ಗ್‌ನಂತ ಮಂದ್ರಸ್ಥಾಯಿ ಶಬ್ದ. ಅದೊಂದ್ ಶಬ್ದ ಸಾಕ್ ಇಡೀ ಕಾಡನನೇ ಮೌನ ಮಾಡಿಕೆ. ಸುಖ ನಿದ್ದೆಂದೆದ್ದ್, ಬೇಟೆಗೆನೋ, ಬೇಜಾರಾಗಿ ಸುಮ್ಮನೆ ಸುತ್ತಿಕೆನೋ ಹೊರ್ಪ ಹೆಬ್ಬುಲಿನ ಪ್ರಾರಂಭ, ಅದರ ಆ ಪ್ರಾರಂಭ ಸುತ್ತ್‌ಮುತ್ತ್‌ನ ಎಲ್ಲವ್ಕೂ ಗೊತ್ತಾಗಿತ್ತ್. ಸಣ್ಣ ಸಣ್ಣ ನಿಟ್ಟುಸಿರ್ ಧೀರ್ಗ ಸ್ವಾಶ, ಸಣ್ಣ ಗುಟ್‌ರ್.. ಇಡೀ ಕಾಡ್‌ಗೆ ಕಾಡೇ ಹೆದ್ರಿ ನಡ್ಗಿ ಹೋಗ್ತಿದ್ದೊ. ಇದ್ ಇಷ್ಟೆನೋಂತ ನೆನ್ನಿಕಂಡರೂ ಅದ್ ಜ್ವಾಲಾಮುಖಿನ ಪ್ರಾರಂಭದ ಘೂತ್ಕರಿಕೆನಾಂಗೆ. ಅಸಹನೆಲೋ... ಅಟ್ಟಹಾಸಲಿನೋ ಒಂದ್ ಭೀಕರ ಗರ್ಜನೆ ಸುತ್ತ್ ಹತ್ತ್ ಗಿರಿಕಂದರಗಳ ನಡ್ಡುಸುವಾಂಗೆ ಇರ್ತಿತ್ತ್. ಸುರುಸುರೂಗೆ ಹೆದ್ರಿಕೆ ಮಿಶ್ರಿತ ಕುತೂಹಲ ದಿನ ದಿನ ಅನುಭವಿಸಿಕಾಕನ ಅದ್ ಒಂದ್ ರೀತಿಲಿ ಅಭ್ಯಾಸ ಆಗಿತ್ತ್. ದಿನಂಪ್ರತಿ ಹೊಸ್ತರಾಂಗೇ ಕಂಡ್‌ಕಂಡ್ ಇತ್ತ್. ಅಂತದರನೇ ಕಾಯುವಾಂಗೆ ಆಗ್ತಿತ್ತ್. ಅಭ್ಯಾಸ ಆಗಿಹೋಗಿತ್ತ್. ಆದರೆ ಎಲ್ಲವ್ಕೂ ಹಾಂಗಿತ್ಲೆ. ಹೊಸ್ಬರಿಗೆ ಅಲ್ಲಿನ ಜೀವನ ಒಂದ್ ಭೀಕರ ಸತ್ಯಾಂತ ಕಾಣ್ತಿತ್. ಅಂತದೇ ಒಂದ್ ಘಟನೆನ ಅನುಭವ ಕುಞ್ಞಣ್ಣಂಗೆ ಆಗಿತ್ತ್. ಇಂದ್ ನೆನ್ನಿಕನ ಅದ್ ಕುಶಿಂತ ಕಂಡದೆ.

ಅಂದ್‌ನ ದಿನ ಹಾಂಗಿತ್ಲೆ.

ಕುಞ್ಞಣ್ಣ ಈಗ ಮೊದ್ವೆ ಆಗಿತ್ತ್. ಮಡಿಕೇರಿಲಿ ಮೊದ್ವೆ ಆಗಿ ಅಲ್ಲಿಂದ ಹೆಣ್ಣ್‌ನ ಕರ್ಕಂಡ್ ಧಾಂಡೇಲಿಗಾಗಿ ಕೇಲಪಾನಿಗೆ ಬಂದಿತ್ತ್. ಅಂವ ಇಷ್ಟಪಟ್ಟ್ ಮೊದ್ವೆ ಆದ ಗೂಡೆ ಅವನ ನಂಬಿ ಅವನೊಟ್ಟಿಗೆ ಬಂದಿತ್ತ್. ಅವಂಗೆ ಗೊತ್ತಿತ್ತ್. ಕೇಲಪಾನಿನ ಬಿಡಾರಲಿ ಅದ್ಕೆ ಇರಿಕೆ ಆಕಿಲೇಂತ. ಹಾಂಗೇ ಅಲ್ಲಿಂದ ಬರೇ ಆರ್ ಕಿ.ಮೀ ದೂರದ ಜಗಲ್‌ಬೇಟಲಿ ಮನೆ ಮಾಡಿತ್ತ್. ಆ ಬಾಡಿಗೆ ಮನೆಲಿ ಎಲ್ಲಾ ವ್ಯವಸ್ಥೆ ಆದ ಮೇಲೆ ಅಲ್ಲಿಗೆ ಹೋದು, ಅಲ್ಲಿವರೆಗೆ ಒಂದೆರಡ್ ದಿನ ಕೇಲಾಪಾನಿಲೇ ಇರ್‍ದೂಂತ ಹೆಣ್ಣನ ಕರ್ಕಂಡ್ ಕೇಲಾಪಾನಿಗೆ ಬಂದಿತ್ತ್. ಅಲ್ಲಿ ಆಗ ಅವ್ಕೆ ಈಗನ ರೆಸಾರ್ಟ್‌ಗಳಾಂಗೆ ಇರುವಂತ ಕಾಟೇಜ್‌ಗ ಇದ್ದೊ. ಅದೆಲ್ಲಾ ಬೆದ್ರ್ ಚೆದ್ದಲ್‌ಗೆ ಮಣ್ಣ್‌ಮೆತ್ತಿ ಮಾಡ್ದ ಹಂಚ್‌ನ ಮನೆಗೆ, ಅದ್ ನಿಜಕ್ಕೂ ತುಂಬಾ ಪೊರ್ಲ್ ಇತ್ತ್. ತಕ್ಕಮಟ್ಟಿಗೆ ಗಟ್ಟಿ ಭದ್ರತೆಲಿನೂ ಇತ್ತ್. ಇಷ್ಟ್ ಮಾತ್ರ ಅಲ್ಲ. ಕೇಲಾಪಾನಿಲಿ ವಿಶ್ವ, ಚಿನ್ನಣ್ಣ, ಮೈನ್ಸ್ ಮೆನೇಜರ್ ಮನು, ಕುಞ್ಞಣ್ಣನವರ ಮ್ಯಾಂಗನೀಸ್ ಗಣಿಲಿ ಕೆಲ್ಸ ಮಾಡುವ ಸುಮಾರ್ ಐವತ್ತರ್‌ಂದ ನೂರ್ ಜನಂಗ ಇದೇ ರೀತಿನ ಬಿಡಾರಲಿ ಇದ್ದೊ ಅಂತಾ ಕಾಡ್‌ನ ನಡುಲಿ ಅದೊಂದ್ ಮಿಲಿಟ್ರಿ ಕ್ಯಾಂಪ್‌ನಂತದ್ ಆಗಿತ್ತ್. ಅಂತಾ ಜಾಗೆಗೆ ಅಲ್ಲಿನ ದನಿ ಒಬ್ಬ ಮೊದ್ವೆ ಆಗಿ ಹೆಣ್ಣ್‌ನ ಕರ್ಕಂಡ್ ಬಂದದೇಂತ ಎಲ್ಲವೂ ಕಾದ್‌ಕಂಡೇ ಇದ್ದೊ. ಅವು ಮೊದ್‌ಮಕ್ಕ ಉಳ್ಕಂಬ ಬಿಡಾರ್‌ನ ಅವ್ಕೆ ಪೊರ್ಲ್ ಕಾಂಬತರಲಿ ಅಲಂಕರಿಸಿದ್ದೊ. ಹೊಸ ಹೆಣ್ಣ್ ಅದರ್ಲಿನೂ, ಮನಮೆಚ್ಚಿದ ಗೂಡೆ. ಕುಞ್ಞಣ್ಣಂಗೆ ಎಲ್ಲಾ ರೀತಿಲಿನೂ ಪೊರ್ಲೇ ಕಾಣ್ತಿತ್ತ್. ಗೂಡೆನ ಕರ್ಕಂಡ್ ಬೈಕ್‌ಲಿ ಸುತ್ತಾಡ್ಸಿತ್. ಗೂಡೆನೂ ಹುಟ್ಟಿದ್ದ್ ಕಾಡ್‌ಲೇ ಆದ ಕಾರಣ ಅದ್ಕೆ ಅದೆಲ್ಲಾ ತುಂಬಾ ಖುಷಿ ಕಾಣ್ತಿತ್ತ್. ಆ ಗೂಡೆನ ಮನ್ಸ್‌ಲಿ ಆದ್ ಮನೆ ಬುಟ್ಟ್ ಬಂದ ಬೇನೆನ ಪ್ರಕೃತಿನ ಸೌಂದರ್ಯಲಿ ಮರ್ಯಕೆ ಪ್ರಯತ್ನ ಪಡ್ತಿತ್ತ್. ನಿದಾನಕ್ಕೆ ಹೊತ್ತ್ ಕತ್ತಲಾಗ್ತ ಇತ್ತ್. ಕರಾಳ ಕತ್ತಲೆನೂ ಹೊಸ ಸುಂದರ ಬಾಂಧವ್ಯ ಒಂದಕ್ಕೆ ಕಾದ್‌ಕಂಡೇ ಇರುವಂಗೆ ಇತ್ತ್. ಒಂಬತ್ ಆಕಾಂಡ್ ಬಂದಾಂಗೆ ಹಕ್ಕಿಗಳ ಮರ್‍ದಟ ಕಡಿಮೆ ಆತ್. ಕತ್ತಲೆನ ಸಾಮ್ರಾಜ್ಯ ಎದ್ರಿಕೆ ಸುರು ಆಗಿತ್ತ್. ಹೊತ್ತ್ ಕಂತುವ ಮುಂದೆ ಕಟ್ಟಕಡೆಗೆ ಎಲ್ಲಿಯೋ ಒಂದ್ ಮುಚ್ಚ ನಾನೇ ದೊಡ್ಡವಾಂತ ಹೇಳಿ ಇಡೀ ಕಾಡ್‌ನ ನಾನೇ ಮಲ್ಗಿಸುವಾಂಗೇ ಕಡೇ ನಾಲ್ಕಾರ್ ಬೂಂ....ಕ್‌ಗಳ ಹೇಳಿ ಸುಮ್ಮನಾತ್. ಎಷ್ಟಕ್ಕೋ ಆಗ ಕತ್ತಲಾಗಿತ್ತ್. ಇನ್ನೆಷ್ಟಕ್ಕೂ ಆಗ ಬೊಳ್ಪಾಗಿತ್ತ್. ಮರದ ಮಾಟೆಂದ ಹೊರ್‍ಟ ಪಾಂಜ ಒಂದ್ ಕೆಟ್ಟ ಶಬ್ದಲಿ ಜೋರ್‌ಲಿ ಬೊಬ್ಬೆ ಹೊಡ್ದಾಂಗೆ ಮರ್‍ಡಿಕೆ ಸುರುಮಾಡ್ತ್. ಕತ್ತಲೆನ ಹಗಲ್ ಸುರು ಆಗಿತ್ತ್. ಜೀನವದ ಅಲ್ಲಿನವರೆಗೂ ಬೇಟೆ, ಕಾಡ್ ಪ್ರಾಣಿಗಾಂತ ಕಳ್ಳವಂಗೆ ಇದೆಲ್ಲಾ ಹೊಸ್ತೂಂತಳೂ

ಕಾಣ್ತಿತ್ಲೆ. ಆದರೆ ಎಲ್ಲವ್ರೂ ಹಾಂಗೆ ಕಾಣ್ತಿತ್ಲೆ. ಪರಿಸ್ಥಿತಿ ಹಾಂಗಿತ್ತ್.

ಹೊತ್ತ್ ಸುಮಾರ್ ರಾತ್ರಿ 9 ಗಂಟೆ ಕಳ್ದಿತ್ತ್. ಕಾಳಿ ನದಿನ ಕೇಲಾಪಾನಿನ ಕಣಿವೆ ಒಂದ್ ರೀತಿಲಿ ಮೌನವಾಗಿಯೇ ಇತ್ತ್. ಆ ಮೌನನ ಮುರಿವಾಂಗೆ, ಬ್ರೇಂಕ್ ಬ್ರೇಂಕ್‌ಂತ ಜೀವ ಮರ್ಕಲಿ ಮರ್ಬ್ವಾಂಗೆ ಕೆಂಪ ಒಂದ್ ಆರ್ಬಾಯಿ ಕೊಟ್ಟ್‌ಕಂಡ್ ಓಡಿಕೆ ಸುರು ಮಾಡಿತ್ತ್. ಅದ್ಕೆ ಏನೋ ಅಪಾಯದ ಸೂಚನೆ ಸಿಕ್ಕಿತ್ತ್. ಕುಞ್ಞಣ್ಣನವು ಇದ್ದ ಬಿಡಾರದ ಹೊರಗೆ ಮಲ್ಗಿದ್ದ ನಾಯಿ ಹೆದ್ರಿ ಸಣ್ಣ ಸೊರಲಿ ಕುಯ್ಯಿ ಕಂಯ್ಯಿಂತ ಹೇಳಿ ಚೆದ್ದಲ್ ಬಾಗಿಲ್‌ನ ಸೆರೆಲಿ ಹೇಂಗೋ ಜಾಗೆ ಮಾಡಿ ಒಳಗೆ ಬಂದ್ ಮೂಲೆಲಿ ಹೆದ್ರಿ ಕುದ್ದಿತ್. ದೂರಲೆಲ್ಲೊ ಅಪಾಯದ ಸೂಚನೆ ಹಿಡ್ದ ಕುರೆ ಒಂದ್ ಕಿರ್ಯೋ......... ಕಿರ್ಯೋ...ಂತ ಎಲ್ಲವ್ರೂ ಯಾವುದೋ ಸೂಚನೆ ಕೊಡ್ತಿತ್ತ್. ಆಗ ಕೇಳ್ತ್·ಆ ಸುರೂನ ಗರ್ಜನೆ.

ಗಬ್ಬ ನಡ್ಗ್‌ಸುವಂತ ಭಯಂಕರ ಗರ್ಜನೆ. ಪಟ್ಟೆ ಹುಲಿ ಒಂದ್ ಅಟ್ಟೆ ಹಾಸಲಿ ಸವಾರಿ ಹೊರ್ಟಿತ್ತ್. ಅದ್ ಅವರ ಬಿಡಾರದ ತುಂಬಾ ಹಕ್ಕಲೆ ದಾಟಿ ಹೋಗ್ತಿತ್ತ್. ಜೀವ ಮಾನಲಿ ಹುಲಿಗಳ ಜ್ಹೂ ನೊಳಗೆ ನೋಡ್ದಲ್ಲದೆ ಮತ್ತೇನೂ ಗೊತ್ತಿಲ್ಲದ ಕುಞ್ಞಣ್ಣನ ಗೂಡೆ ಹೆದ್ರಿಕೆಲಿ ಒಮ್ಮನೇ ನಡ್ಗಿ ಹೋಗಿತ್ತ್. ಆ ಹುಲಿ ಅದರನೇ ತಿಂಬಕೆ ಹೊರ್ಟಿರೊಕುಂತ ಭಾವನೆ ಬಂದಾಗಿತ್ತ್. ನಡ್ಗಿಕಂಡೇ ನಾವಿಲ್ಲಿ ಇರ್ದು ಬೇಡ ಪೋಯಿ ಎಲ್ಲಿಗಾರ್‌ಂತ ಮರ್ಡಿಕೆ ಸುರುಮಾಡ್ತ್. ಅತ್ತ ಹುಲಿ ಇತ್ತ ಹೆಣ್ಣ್. .ಹುಲಿನ ಮರ್ಡ್‌ಬಡಾಂತ ಹೇಳಿಕಾದುಲೆ. ಹೆಣ್ಣ್‌ಮರ್ಡ್‌ಬಡಾಂತ ಹೇಳ್ರೆನೂ ಮರ್ಡುದು ನಿಲ್ಸುದುಲೆ.. ಹೇಂಗೆ ಸಮಾಧಾನ ಮಾಡ್ದು. ಹೆಣ್ಣ್‌ನ ಸಮಾಧಾನಕ್ಕೆ ಅವಿದ್ದ ಚೆದ್ದಲ್ ಮನೆನ ಬಾಗಿಲ್‌ಗೆ ಅವನ ಬೈಕ್‌ನ ಅಡ್ಡ ಹಿಸಿ ಇದರ ನೂಕಿ ಅದ್ ಬಾಕಿಲೆ ಮಾರಾಯ್ತಿಂತ ಸಮಾಧಾನ ಮಾಡಿಕೆ ನೋಡ್ತ್. ಅವಂಗೆ ಗೊತ್ತಿತ್ತ್. ಹುಲಿ ಹೋಗಲಿ ನಾಯಿನೂ ಅದರ ದೂಡಿ ಬಾದೂಂತ. ಅಂದರೂ ಸಮಸ್ಯೆ ತೀರ್ತ್‌ಲೆ. ಕಡೆಗೆ ಸಾಮಾನ್ಯ ದಿನೋಳು ಅಗ್ಗೆ ಹಾಕುವ ರಾಶಿಲಿ ಇದ್ದ ಕಿಚ್ಚಿಗೆ ಮತ್ತೆ ಒಂದೆರ್ಡ್ ಸೌದೆ ಹಾಕಿ "ನೋಡ್ ಕಿಚ್ಚಿ ಇದ್ದಲ್ಲಿ ಅದ್ ಬಾಕಿಲೇಂತ" ಹೇಳ್ತ್. ಅಷ್ಟೊತ್ತಿಗೆ ಹೂಂಕರ್ಸಿಕಂಡ್ ಹುಲಿ ಸುಮಾರ್ ದೂರ ಹೋಗಿರೊಕು. ಅದ್ ದೂರ ಹೋದಾಂಗೆ ಅದರ ಮರ್ಡಟ ಕ್ಷೀಣ ಆಕಂಡ್ ಬಾತ್. ಈಗ ಹೆಣ್ಣ್‌ನ ಕಣ್ಣಲಿ ನೀರ್ ನಿತ್ತಿತ್ತ್. ಆದರೆ ಮೈಯೆಲ್ಲಾ ನಡ್ಗಿಕಂಡೇ ಇತ್ತ್. ಅಂತಾ ಸಮಯಲಿ ಅದ್ ಹೇಳ್ತ್. ನಾಳೆ ಬೊಳ್ಪಾದರೆ ನಾ ಈ ಮನೆಲಿ ಇರಿಕಿಲೇಂತ. ನಾಳೆ ಬೊಳ್ಪಾದುಂತ ಹೇಳುವ ನಂಬಿಕೆನೇ ಅದ್ ಕಳ್ಕಂಡಿತ್ತ್. ಅಂತಾ ಒಂದ್ ರಾತ್ರೆನ ಅವು ಕಳ್ದಿದ್ದೊ. ಮರ್ದಿನ ಬೊಳ್ಪಾದ ಕೂಡ್ಲೆ ಜಗಲ್‌ಬೇಟದ ಮನೆಗೆ ಹೋವ ಎಲ್ಲಾ ಸಿದ್ದತೆ ಮಾಡ್ತ್. ಇದೊಂದ್ ಘಟನೆ ಈಗ ಕೇವಲಾಂತ ಕಂಡದೆ.

ಆದರೆ ಆಕ್ಷಣಲಿ ಅದರ ಅನುಭವಿಸಿದವ್ಕೇ ಅದ್ ಗೊತ್ತಾದು. ಅಂತಾ ಕೆಲವಾರ್ ಅನುಭವ ಆದ ಮೇಲೆ ಒಂದ್ ರೀತಿಲಿ ಅದ್ಕೆಲ್ಲಾ ಅದ್ ಒಗ್ಗಿಕಂಡತ್. ಆ ಕಾಡುನೂ ಅದ್ಕೆ ಸಂತೋಷ ಕೊಡ್ತಿತ್ತ್.

ಕುಞ್ಞಣ್ಣ ಜೀವನಲಿ ಕಂಡ ಅದ್ಭುತ ಕಾಡ್ ಅದಾಗಿತ್ತ್. ಅದರ ವರ್ಣಿಸಿಕೆ ಅವನ ಹಕ್ಕಲೆ ಶಬ್ದನೇ ಇತ್ಲೆ. ಕೇಲಾಪಾನಿನಂತ ಜಾಗೆ ಅಂವ ಯಾಗೋಳು ಕಂಡತ್ಲೆ. ಎರ್ಡ್ ಮೂರ್ ಫರ್ಲಾಂಗ್ ಕೆಳಗೆ ಹರಿವ ಕಾಳೀ ನದಿ, ಅದರ ಹರಿದು ತಡ್ದ್ ಗಣೇಶ ಗುಡಿಲಿ ಎರ್ಡ್ ಗುಡ್ಡೆಗಳ ನಡುಲಿ ಕಟ್ಟಿದ ಅಣೆಕಟ್ಟ್‌ಂದ ಉಸ್‌ರ್ ಕಟ್ಟಿ ತುಂಬಿಕಂಡ್ ಇರುವ ಆ ನದಿನ ಹಿನ್ನೀರ್. ಎಷ್ಟೆಷ್ಟೆಲ್ಲಾ ಜೀವ ನಾಡಿಗಳ ಜೀವ ಜಂತುಗಳ, ಮರ ಗಿಡಗಳ ಮುಳ್ಗ್‌ಸಿತ್ತ್. ಅದರ ಗರ್ಭದ ಒಳಗೆ ಮುಳ್ಗಿ ಹೋದ ಸತ್ಯಗ ಎಷ್ಟೋ. ಆ ಸತ್ಯಗಳ ಸ್ವಲ್ಪ ಮೇಲೆ ನಿತ್ತ್ ಕುಞ್ಞಣ್ಣ ಈಗ ನೋಡ್ತಿತ್ತ್. ಅವನ ಕಣ್ಣಿಗ್ ಕಾಂಬ ಸತ್ಯ ಸೊಲ್ಪ ಮಾತ್ರ. ಎಂತಾ ನಾಡ್ ಎಂತಾ ಕಾಡ್! ಪಶ್ಚಿಮ ಘಟ್ಟಗಳ ಸಾಲ್‌ಲಿ ಅರಬ್ಬೀ ಸಮುದ್ರದ ಈಚೆ ಸುಮಾರು ನೂರ್ ಕಿ.ಮಿ ಒಳಗೆ ಇರುವ ಅರಣ್ಯ ಒಂದ್ ಜೀವ ವಿಚಿತ್ರಗಳ ಸಂಗಮ. ಕೊಡಗ್, ದಕ್ಷಿಣ ಕನ್ನಡದ ಸುಳ್ಯ, ಬೆಳ್ತಂಗಡಿ, ಇನ್ನೊಂದ್ ಕಡೆ ಹಾಸನ ಜಿಲ್ಲೆನ ಸಕಲೇಶಪುರ, ಅತ್ತ ದಾಟಿರೆ ಚಿಕ್ಕಮಗಳೂರು, ಮೂಡಿಗೆರೆ, ಮತ್ತೆ ದಾಟಿರೆ ಶಿವಮೊಗ್ಗ ಜಿಲ್ಲೆ. ನೀರೇ ನರ್ತಿಸಿ ಬೀಳುವ ಜೋಗ ಮತ್ತೆ ಮುಂದೆ ಉತ್ತರ ಕನ್ನಡದ ಅಬೇಧ್ಯಯ ಕಾಡ್‌ಗ, ಹಳಿಯಾಳ, ಯಲ್ಲಾಪುರಂದ ಆಚೆಗೆ ಸರ್ವ ಅರಣ್ಯ ಸಂಪತ್ತ್‌ಗಳ ಕಾಡ್ ದಾಂಡೇಲಿ ಅಭಯಾರಣ್ಯ. ಅಲ್ಲಿಂದ ಮುಂದೆ ಸಾಗಿರೆ ಎಡಕ್ಕೆ ಸದಾಶಿವ ಘಾಟ್, ಆಚೆಗೆ ದೂದ್ ಸಾಗರ್, ಅನ್‌ಮೋಡ್ ಘಾಟ್ ಮುಂದೆ ದಾಟಿರೆ ಗೋವಾ.... ಎಂತಾ ಸುಂದರ ಸಾಮ್ರಾಜ್ಯ. ಅದೆಲ್ಲಾ ಕಣ್ಣ್‌ನ ಎದ್ರ್‌ಗೇ ಇತ್ತ್. ಎಲ್ಲಾ ಸ್ವಾರ್ಥ ಸಾಮ್ರಾಜ್ಯಗಳ ಅದ್ ತೊಳ್ದ್ ಹಾಕುವಾಂಗೆ ಇತ್ತ್. ಕೇಲಾಪಾನಿ ಇಂತ ಮನೋಹರ ಅರಸೊತ್ತಿಗೆನ ಒಂದ್ ರಾಜಧಾನೀಂತ ಅವಂಗೆ ಕಾಣ್ತಿತ್ತ್. ಅವಂಗೆ ಕಂಡದ್ ಮಾತ್ರ ಅಲ್ಲ, ಅದ್ ಹಾಂಗೆನೇ ಇತ್ತ್. ಎಲ್ಲ ಇಲ್ಲದರ ನಡುಲಿ ಎಲ್ಲನೂ ಇತ್ತ್. "ಅಡಿಯ ಮುಂದಿಡೆ ಸ್ವರ್ಗ" ಆ ಮಾತ್ ಇಲ್ಲಿತ್ಲೆ. "ಅಡಿಯಿಡುವೆಡೆಯೆಲ್ಲಾ ಸ್ವರ್ಗ, ಅಡಿಯ ಅಡಿಗಡಿಗೆ ಸ್ವರ್ಗ, ಇದೇ ಸ್ವರ್ಗದಾಂಗಿತ್ತ್. ಅಂತಾ ಕೇಲಾಪಾನಿಲಿ ಕಳ್ದ ಎರ್ಡ್ ವರ್ಷಕ್ಕೂ ಹೆಚ್ಚ್‌ನ ಸಮಯಲಿ ಕುಞ್ಞಣ್ಣ ಕಲ್ತದ್ ಸಣ್ಣದಲ್ಲ. ಕಾಡ್ ಮರಗಿಡಗಳ, ಪಕ್ಷಿಕೀಟಗಳ, ಅರಣ್ಯವಾಸಿ ಪ್ರಾಣಿಗಳ ಬಗ್ಗೆ ಒಂದ್ ಅಧ್ಯಯನದಾಂಗೆ ಆ ದಿನಗ ಕಳ್ದ್‌ದ್ ಹೋಗಿತ್ತ್. ಅಷ್ಟ್ ಮಾತ್ರ ಅಲ್ಲ ಆ ಕಾಡ್‌ಲಿ ವಿಶೇಷ ಖನಿಜ ಸಂಪತ್ತ್ ತುಂಬಿತ್ತ್. ಎಡ್ಗಿದ ಒಂದೊಂದ್ ಹೆಜ್ಜೆಗೂ ಸಿಕ್ಕುವ ಕಲ್ಲ್‌ಗಳ ಒಳಗೆ ಏನಿರ್ದುಂತ ಯೋಚನೆ

ಮಾಡ್‌ವ ಸಾಮರ್ಥ್ಯ ಬಂದಿತ್ತ್. ಆ ಕಾಡ್‌ನ ಮಣ್ಣ್‌ನ ಒಳಗೆ ಅಗಾಧವಾದ ಮ್ಯಾಂಗನೀಸ್, ಕಬ್ಬಿಣದ ಅದ್‌ರ್‌ನಂತ ಬಾರಿ ಖನಿಜ ಸಂಪತ್ತೇ ತುಂಬಿತ್ತ್. ಎಂತಾ ಅದ್ಭುತ ದಿನಗ. ಅವರ ಬಿಡಾರಂದ ಸುಮಾರ್ ನೂರೈವತ್ತ್ ಅಡಿ ದೂರಲೇಒಂದ್ ಕಜೆ ಜಾಗೆ ಇತ್ತ್. ಅಲ್ಲಿ ಸುಮಾರ್ ಹತ್ತ್‌ರಂದ ಹದಿನೈದ್ ಕಾಟಿಗಳ ಹಿಂಡ್ ವರ್ಷಪೂರಾ ಅಲ್ಲೇ ಇರ್ತಿದ್ದೊ. ಸಣ್ಣ ಕರುಗ, ದೊಡ್ಡ ಕಾಟಿಗ, ಅವರ ಸಂಭ್ರಮನ ದೂರಂದ ಕುದ್ದ್ ನೋಡ್ದೇ ಒಂದ್ ಸಂತೋಷ. ಯಾರಾರ್ ಬೇಕಾದವು ಬಂದರೆ ಅವರ ಕರ್ಕಂಡ್ ಹೋಗಿ ಅವೇ ಸಾಂಕ್‌ತಿದ್ದ ರೀತಿಲಿ ತೋರ್ಸ್ತಿದೊ. ಬೊಳ್ಪುಗೆ ಇನ್ನೂ ಬೆಳ್ಗರಿಗೆ ಮುಂದೆನೇ ಮನೆ ಮುಂದೆನ ಮರಲಿ ಕುದ್ದ್ ಬೊಬ್ಬೆ ಹಾಕುವ ಮುಚ್ಚಂಗ, ತೆಕ್ಕ್ ತೆಕ್ಕೋಂತ ಹೇಳುವ ಕಾಡ್ ಕೋಳಿಗ, ಚಿಯ್ಯೋ... ಚಿಯ್ಯೋಂತ ಸಂಗೀತ ಹೇಳುವ ಚೆಣಿಲ್‌ಗ, ಸುತ್ತ ಪೂರಾ ಬೊಳ್ಪಾಕನ ಗೂಂಕ. ಗೂಂಕ್...ಂತ ಮರ್ಡ್ವ ಗುಳ್ಳುಮ್ಮೆಗ ಒಟ್ಟ್‌ಲಿ ಒಂದ್ ಸಂಗೀತ ಸಾಮ್ರಾಜ್ಯ ಅವರ ಎದ್ರುಸುದರೊಟ್ಟಿಗೆ ಅವ್ಕೆ ಬೊಳ್ಪಾಗ್ತಿತ್ತ್. ಅದ್ ಅಂದ್‌ನ ಸುಂದರ ದಿನದ ಸುರು ಆಗ್‌ತಿತ್ತ್.

ಬೊಳ್ಪುಂದ ಹಿಂಬತ್‌ನ ವರೆಗೆ ಗಣಿಕಾರಿಕೆನ ಎಲ್ಲಾ ಕೆಲ್ಸ ನೋಡಿಕಂಬೊದರ ಹಿಂಬತ್‌ಲಿ ನಿಲ್ಸಿ, ಒಂದೋ ಗಣೇಶ ಗುಡಿಗೆ ಇಲ್ಲದಿದ್ದರೆ ಜಗಲ್ ಬೇಟೆಗೆ ಹೋಗಿ ಬರ್ತಿದ್ದೊ. ಬೇಕಾದರ ತೆಕಂಡ್ ಬರ್ತಿದ್ದೊ. ಹಾಂಗೆ ಹೋಗಿ ಬಾದರ್ಲಿನೂ ಒಂದ್ ರೀತಿಲಿ ಅರಣ್ಯ ಧಾಮದ ಸಫಾರಿನಾಂಗೆ ಅದ್ ಇರ್ತಿತ್ತ್. ಇಲ್ಲೊಂದ್ ವಿಷೇಶನ ಕುಞ್ಞಣ್ಣ ಕಂಡಿತ್ತ್. ದಿನಾ ಅಥವಾ ಎರ್ಡ್ ದಿನಕ್ಕೊಮ್ಮೆ ಜಗಲ್‌ಬೇಟ್ ಕಡೆಂದ ಬಾಕನ ಒಂದ್ ಜೊತೆ ಹುಲಿಗ ಒಂದ್ ಸರಿಸಮಯಲಿ ಅವ್ಕೆ ಕಾಣ್ತಿತ್. ಅದಲ್ಲದೇ ಒಂದ್ ಒಂಟಿ ಹುಲಿನೂ ಒಮ್ಮೊಮ್ಮೆ ಮಾರ್ಗದಾಟುದರ ಕಾಣ್ತಿದ್ದೊ. ಕುಞ್ಞಣ್ಣನ ಪ್ರಕಾರ ಅದೊಂದ್ ಪ್ರಾಯಸಂದ ಮುದಿ ಹುಲಿ ಆಗಿತ್ತ್. ಅದರ ಬಗ್ಗೆ ಕುಞ್ಞಣ್ಣಂಗೆ ಹಿರಿಯರ ಬೇಟೆ ಅನುಭವದ ರೀತಿಲಿ ಒಂದ್ ಹೆದ್ರಿಕೆ ಆಗಿತ್ತ್. ಯಾಕೇಂತ ಹೇಳ್ರೆ ಮುದಿ ಹುಲಿಗ ಅವ್ಕೆ ಬೇಟೆ ಆಡುವ ತಾಕತ್ತ್ ಕಳ್ಕಂಡ ಮೇಲೆ ಅವು ನರಭಕ್ಷಕ ಆಗಿದ್ದೊಂತ್ ಅವಂಗೆ ಗೊತ್ತಿತ್ತ್. ಆದರೆ ಒಂದ್ ಅಂತಾ ಕಾಡ್‌ಲಿ ಅದ್ಕೆ ಆಹಾರ ಸಿಕ್ಕುದು ಕಷ್ಟ ಇರಿಕಿಲೇಂತ ತಿಳ್ಕಂಡಿತ್ತ್. ಹಾಂಗೇಂತ ಹೇಳ್ರೆ ಎಲ್ಲಿಯೋ ಒಂದೊಂದ್ ಹುಲಿಗ ನರಭಕ್ಷಕ ಆದ ಉದಾಹರಣೆ ಸಿಕ್ಕಿದೆ ಹೊರ್ತ್ ಎಲ್ಲವೂ ಹಾಂಗೆ ಆದುಲೆ. ಆದರೂ ಅಂತ ದಟ್ಟ ಕಾಡ್‌ನ ನಡುಲಿ ಅಪಾಯ ಇದ್ದೇ ಇತ್ತ್. ಅದ್ಕೆ ಏನು ಮಾಡ್ದೂಂತ ಕುಞ್ಞಣ್ಣ, ವಿಶ್ವ, ಚಿನ್ನಣ್ಣ, ಮನು ಎಲ್ಲವೂ ಯೋಚನೆ ಮಾಡಿಕಾಕನ ಎಲ್ಲಿಂದಾರ್ ಒಂದ್ ಬೆಡಿತಂದ್ ಹಿಸಿಕಂಬೊದುಂತ ಮಾತಾಡಿಕಂಡೊ. ಎಲ್ಲಿಂದ ಬೆಡಿ ಮಾಡ್ದು? ಅಲ್ಲದೆ ಈಗ

ಈ ಊರ್‌ಲಿ ಬೆಡಿನ ಸಂಬಂಧನೇ ಬೇಡಾಂತ ಕುಞ್ಞಣ್ಣಂಗೆ ಕಂಡಿತ್ತ್. ಒಟ್ಟಾರೆ ನಮ್ಮ ರಕ್ಷಣೆಗಾಗಿ ಏನಾರ್ ಮಾಡೊಮೊ ಅಷ್ಟೆ ಸಾಕ್ ಬೇರೆಏನೂ ಬೇಡಾಂತ ಕಂಡತ್. ಆಗ ಕುಞಣ್ಣಂಗೆ ಒಂದ್ ವಿಶೇಷ ಪ್ಲೇನ್ ಕಂಡತ್. ಅವನ ತಲೆಗೆ ಬಾದು ಅಂತದೇ ವಿಚಾರಗ. ಪಂಡ್ ಶಾಲೆಗೆ ಹೋಕನನೇ ಪಿಸ್ತೂಲ್ ಕಟ್ಟಿದವ. ಈಗ ಅದ್ ಇನ್ನೂ ಹೆಚ್ಚಿನ ರೀತಿಲಿ ಇತ್ತ್. ಒಂದ್ ಅಪಾಯಕಾರಿ ಚಿಂತನೆ ಅವಂಗೆ ಬಂದಿತ್ತ್. ಅದ್ ನಿಜಕ್ಕೂ ಒಂದ್ ಅದ್ಭುತ ಕೆಟ್ಟ ಕಾರ್ಯ ಆಗಿತ್ತ್. ಆದರೆ ಜೀವಂದ ದೊಡ್ಡದ್ ಯಾವ್ದೂ ಅಲ್ಲ. ಅಂವ ಹೇಳ್ದಕ್ಕೆ ಎಲ್ಲವೂ ಒಪ್ಪಿದ್ದೊ. ಮೊರ್ದಿನನೇ ಅಂವ ಧಾಂಡೇಲಿ ಪೇಟೆಗೆ ಹೋಗಿ ಸುಮಾರ್ ಕರೆಂಟ್ ವೈಯರ್‌ಗಳ ತಂದಿತ್ತ್. ಅದರ ಅವಿದ್ದ ಕ್ಯಾಂಪ್‌ನ ಸುತ್ತೊಳೂ ಸುಮಾರ್ ಇನ್ನೂರಡಿ ದೂರಕ್ಕೆ ಏಳೆಂಟ್ ಕಡೆಗೆ ಎಲ್ಲಿಂದ ಅಪಾಯ ಉಟ್ಟೋ ಅಲ್ಲಿ ಅದರ ಕೊಡಿಗೆ ಅವರ ಮೈನ್ಸ್‌ಲಿ ಉಪಯೋಗಿಸುವ ಕೇಪು ಮತ್ತೆ ಸ್ಫೋಟಕಕ್ಕೆ ಜೋಡಣೆ ಮೂಡಿತ್ತ್. ಅವನ ಯೋಚನೆನ ಪ್ರಕಾರ ಕ್ರೂರ ಮೃಗಗ ಏನಾರ್ ಬಿಡಾರದ ಹಕ್ಕಲೆ ಬಾವಾಂಗೆ ಇದ್ದರೆ ಬಿಡಾರದ ಒಳಗೆಂದಲೇ ಅದರ ಸ್ಫೋಟಿಸುವ ರೀತಿಲಿ ಅದರ ಅಳವಡಿಸಿತ್ತ್. ಬಿಡಾರದೊಳಗೇ ಕುದ್ದ್ ಮೋಟಾರ್ ಸೈಕಲ್‌ನ ಬೆಟ್ರಿಗೆ ಪ್ಲಸ್ ಮೈನಸ್‌ಗೆ ವಯರ್‌ಗಳ ಮುಟ್ಟಿಸಿರೆ ಅದ್ ಹೊಡಿವಾಂಗೆ ಮಾಡಿತ್ತ್. ಆದರೆ ಯಾಗೋಳೂ ಅದರ ಹೊಡ್ಸ್‌ವಂತ ಪ್ರಮೇಯ ಬಂದಿತ್ಲೆ. ಆದರೂ ಇಂದ್ ನೆನ್ಸಿರೆ ಅಂತಾ ಭೀಕರ ಚಿಂತನೆ ಹೇಂಗೆ ಬಾತ್‌ಂತ್ಲೇ ಆಶ್ಚರ್ಯ ಆದೆ. ಆದರೆ ಎಲ್ಲವ್ಕೂ ಅವರವರ ಜೀವನೇ ದೊಡ್ಡದ್. ಎಲ್ಲವ್ಕೂ ಹೆದ್ರಿಕೆ ಇದ್ದದ್ ಹುಲಿಗಳ್ದ್ ಮಾತ್ರ ಅಲ್ಲ, ಕರಡಿಗಳೂ ಅಲ್ಲಿ ಇದ್ದೊ. ಇವೆರ್ಡರ ಬುಟ್ಟ್ ಬೇರೆದರ ಬಗ್ಗೆ ಹೆದ್ರಿಕೆ ಇತ್ಲೆ. ಕುಞ್ಞಣ್ಣಂಗೆ ಕೇಳಿ ಗೊತ್ತಿತ್ತ್. ಓದಿ ತಿಳ್ಕಂಡಿತ್ತ್. ಹುಲಿಗಳ ಜೀವನದ ಬಗ್ಗೆ ಸೂಕ್ಷ್ಮಲಿ ಗಮನಿಸಿತ್ತ್. ಹುಲಿಗಳ ಹೊಡ್ದ ಅಪ್ಪಯ್ಯಜ್ಜ, ರಾಮಯ್ಯಜ್ಜ, ಬಾಬಣ್ಣನವರ ಅನುಭವನೂ ಇಲ್ಲಿ ಅವನ ಸೂಕ್ಷ್ಮತೆಗೆ ಸಾಕಾರ ಕೊಟ್ಟಿತ್ತ್. ಸಾಮಾನ್ಯವಾಗಿ ಹುಲಿಗಳ ಕಾರ್ಯವ್ಯಾಪ್ತಿ ಅಥವ ಬೊಡ್ಕ್‌ವ ತಿರ್ಗಾಟದ ಸುತ್ತಳತೆ ಹದಿನೈದರ್‌ಂದ ಐವತ್ತ್ ಚದರ ಕಿ.ಮೋ. ವ್ಯಾಪ್ತಿಲಿ ಇದ್ದದೆ. ಆದರೆ ಎಲ್ಲಾ ಕಾಡ್‌ಲಿ ಎಲ್ಲಾ ಪರಿಸರಲಿ ಒಂದೇ ರೀತಿಲಿ ಇರ್ದುಲೆ. ತಿಂಬಕೆ ಆಹಾರ ಸಿಕ್ಕುವ ಹುಲಿನ ಹೋಂ ರೇಂಜ್ ಸಣ್ಣದಾಗಿದ್ದರೆ, ಆಹಾರಕ್ಕೆ ಹುಡ್ಕಿಕಂಡ್ ಸಿಕ್ಕದೇ ಅಲ್ದಾಡುವ ಹುಲಿಗಳ ಹೋಂ ರೇಂಜ್ ದೊಡ್ಡದಿದ್ದವೆ. ಇವೆಲ್ಲದಕ್ಕೆ ಅಪವಾದನೂ ಇದ್ದದೆ. ಅಂಥ ಅನುಭವಗ ಈಗ ಕುಞ್ಞಣ್ಣಂಗೂ ಆಗಿತ್ತ್. ಬೈಕ್‌ಲಿ ಹೋಗಿ ಬಾಕನ ಸಾಮಾನ್ಯ ಸಿಕ್ಕುವ ಹುಲಿಗ ಕಾಣದಿದ್ದರೆ ಛೇ! ಏನಾತೋಂತ ಕಾಣ್ತಿತ್ತ್. ಯಾವುದೋ ಒಂದ್ ಕಡಿಮೆ ಆದಾಂಗೆ, ದಿನ ಒಂದ್ ಹೆಚ್ಚ್ ಕಡಿಮೆ ಆದಾಂಗೆ ಆಗ್ತಿತ್ತ್ ಆದರೆ

ಅದೆಲ್ಲದರ ಸರಿಮಾಡುವಾಂಗೆ ಎಲ್ಲಿಯೋ ದೂರಂದ ಘರ್ಜನೆ ಒಂದ್ ಕೇಳಿಕಾಕನ ತುಂಬಾ ಕುಶಿ ಆಗ್ತಿತ್ತ್. ಸರಿನೋ ಅಲ್ಲನೋ ಗೊತ್ತಿಲೆ. ಈ ಘರ್ಜನೆ ಮಾಮೂಲ್‌ನ ಹುಲಿದ್ ಅಲ್ಲನೋ ಏನೋಂತ ಕಂಡದೆ. ಇದ್ ಬರೀ ಹುಲಿಗೆ ಮಾತ್ರ ಅಲ್ಲ. ಬಿಡಾರಂದ ಕೆಳಗಿರುವ ಕಾಟಿಗಳ ಹಿಂಡ್‌ಲಿನೂ ಕೆಲವೊಮ್ಮೆ ಕಡಿಮೆ ಕಾಂಬಕನ ಹಟ್ಟಿಲಿರುವ ಹಸುಗಳಡೆಲಿ ಒಂದ್ ಕಡಿಮೆ ಆದಾಂಗೆ ಆಗ್ತಿತ್ತ್. ಸಣ್ಣದರ್ಲಿ ಟಾರ್ಜಾನ್, ಮೌಗ್ಲಿಗಳ ಕತೆ ಓದಿಕಾಕನ ಆಗ್ತಿದ್ದ ಸಂತೋಷಗ ಈಗ ಸ್ವತಾ ಅನುಭವಿಸಿದಾಂಗೆ ಕಾಣ್ತಿತ್ತ್. ಮನ್ಸ್‌ಗೆ ಬಾರೀ ಬೇನೆನೂ ಆಕಂಡಿತ್ತ್. ಇಂತಾ ಪರಿಸರಲಿ ನಾ ಕಾಂಬ ಸತ್ಯ. ಇಂದ್ ಇದ್ದಾಂಗೆ ಹಿಂದೆ ಇದ್ದದ್ ಅಲ್ಲ. ಆದ್ ಇದರ್ದಂದಳೂ ಎಷ್ಟೆಷ್ಟೋ ವೈಭವಲಿ ಇತ್ತ್. ಈಗ ಕಂಡ್‌ಕಂಡಿರ್ದು ಅದೆಲ್ಲದರ ಒಂದ್ ಭಾಗ ಮಾತ್ರಾಂತ. ಅದ್ ನಿಜನೂ ಹೌದು. ನಿಸರ್ಗ ಸೌಂದರ್ಯಂತ ಕೃತಕತೆನ ತುಂಬದರ್‌ಂದ ಪ್ರಕೃತಿನ ಸಹಜತೆನೇ ಏರ್ ಪೇರಾಗಿ ಹೋಗುಟು. ಒಂದ್‌ಲ್ಲ ಒಂದ್ ಬಂಧನಲಿ ಎಲ್ಲವೂ ಬಂಧಿಯಾಗಿ ಹೋಗೊಳೊ. ಒಂದ್ ಕಾಲಲಿ ಈ ಪ್ರಪಂಚನ ಆಳಿಕಂಡಿದ್ದ ಡೈನೋಸಾರ್‌ಗ ಈಗಿಲ್ಲೆ. ಅದರ ಅದ್ಭುತನ ನಾವು ಈಗ ಸಿನೆಮಲಿ ಕಂಡವೆ. ಪ್ರಕೃತಿನ ಮೇಲೆ ನಾಗಿರಿಕತೇಂತ ಹೇಳುವ ಅನಾಗರಿಕತೆ ಸವಾರಿ ಮಾಡಿಕಂಡುಟ್ಟು. ಸ್ವಚ್ಛಂದ ಆಗಿ ತಿರ್ಗಿಕಂಡ್ ಇದ್ದ ಪ್ರಾಣಿಗಳ ಬಂಧನಲಿ ಹಿಸ್ಸಿ ಅದರ ನೋಡಿಕೆ ಜನಬಾವಾಂಗೆ ಮಾಡಿ ಅದ್ಕೊಂದ್ ಹೆಸರ್ ಕೊಟ್ಟವೆ. ಇಡೀ ಪ್ರಪಂಚದ ದೇಶಲಿ ಅದರೊಂದು ಉದ್ಯೋಗ ಮಾಡಿಕಂಡ್ ಸಂತೋಷ ಪಟ್ಟವೆ. ಆಫ್ರಿಕಾದ ಕಾಡ್‌ಲಿ ಸಂತೋಷಲಿದ್ದ ಗೋರಿಲ್ಲಾ ಮೈಸೂರು ಮೃಗಾಲಯಲಿ ಕಣ್ಣೀರ್ ಹಾಕುದು ಯಾರಿಗೂ ಕಾಂಬೋದ್ಲೆ. ಎಲ್ಲಿದೋ ಪ್ರಾಣಿ ಎಲ್ಲಿಯೋ ಬಂಧನಲಿ ಇರಿಕನ ಕಾಂಬ ಕಣ್ಣ್‌ಗೆ ಅದರ ಕಣ್ಣೀರ್ ಕಾಂಬೋದೇ ಇಲ್ಲೆ . ಅಂತ ಸ್ವಚ್ಛಂದತೆನ ಕಂಡ ಎಷ್ಟೆಷ್ಟೋ ಜೀವಗ ಇಂದ್ ಇಲ್ಲದಿದ್ದರೂ ಅವರ ಆತ್ಮಗ ಇಂತ ಬಂಧನನ ಕಂಡ್ ಚಡಪಡಿಸಿಕಂಡ್ ಇರುವೋ. ಮೃಗಾಲಯಾಂತ ಹೆಸರ್ಲಿ ಯಾರ್ದೋ ಗತ್ತ್‌ಗಾಗಿ, ಯಾರನೋ ಖುಷಿ ಪಡ್ಸಿಕೆ ಅವರೆಲ್ಲಾ ಬಂಧನಲಿ ಹಿಸಿ ಅಂತ ಸುಂದರ ಜೀವಿಗಳ ಯಾರ್ದೋ ಬಿಕ್ಷಾನ್ನಲಿ ಸಾಂಕುದರ ಕಾಂಬಕನ ಈ ಮೊಯ್ಸಿರಷ್ಟ್ ಕ್ರೂರಿಗ ಯಾರೂ ಇಲ್ಲೇಂತ ಕಾಂಬಕೆ ಸುರು ಆಗಿತ್ತ್. ಅವನೂ ನೋಡಿತ್ತ್ ಮೃಗಾಲಯಗಳ. ಅಲ್ಲಿ ಅವ್ಕೇ ಬೇಕಾದ ಆಹಾರಗ ಇರ್ದುಲೆ. ಆಫ್ರಿಕಾದ ಜಿರಾಫೆ ಅದ್ಕೆ ಕೊಡುವ ತಿನಿಸ್‌ನ ತಿನ್ನದೆ ಹಕ್ಕಲೆ ಇದ್ದ ಮರದ ಚೋಲಿನ ಎಳ್ಡ್ ತಿಂಬೊದು, ಬಂಧನದಲ್ಲಿದ್ದ ಗೊರಿಲ್ಲಾ ಅದರ ಭೂತಕಾಲದ ವೈಭವನ ನೆನ್ಸಿಕಂಡ್ ಕಣ್ಣೀರ್ ಹಾಕುದು ಕಾಂಬಕನ ಕುಣ್ಣಿಣ್ಣಂಗೆ ಕಾಣ್ತಿತ್ತ್. ನಮ್ಮ ದೇಶದ ಗಾಂಧಿ ಅಜ್ಜ ಬಂಧನ ಇಲ್ಲದೆ ಬೊದ್ಕುವ ಬೇಡಿಕೆಗಾಗಿ

ಇಡೀ ಜೀವನನೇ ತ್ಯಾಗ ಮಾಡ್ದೊ. ಆಫ್ರಿಕಾ ದೇಶದ ಮಂಡೇಲಾಂತ ಹೇಳವು ಇಡೀ ಜೀವನದ ಅರ್ಧಭಾಗಕ್ಕೂ ಹೆಚ್ಚ್ ಜೈಲಿಲೇ ಕಳ್ದ್ ಕಡೆಗೂ ಗೆದ್ದೊ. ಈಗನವ್ಕೆ ಅದ್ ಯಾಕೆ ಅರ್ಥ ಆದುಲೆ. ಬಂಧನಲಿ ಇರುವ ಪ್ರಾಣಿಗಳ ಕಣ್ಣ್‌ಲಿ ಯಾಕೆ ಗಾಂಧಿ, ಮಂಡೇಲಾನ ಕಾಂಬೊದುಲೆ? ಹುಚ್ಚ್ ಹಿಡ್ದ್ ತಿರ್ಗುವ ನಾಯಿಗಳ ಕೊಂದರೆ ಅದೂ ತಪ್ಪೂಂತ ಹೇಳುವವೂ ಇಲ್ಲಿ ಒಳೊ. ಜೀವನ ಪೂರಾ ಹಸುಗಳ ಹಟ್ಟಿಲಿ ಕಟ್ಟಿ ಅದರ್‌ಂದ ಏನೆಲ್ಲಾ ಲಾಭ ಪಡಿಯಕ್‌ಂತ ಹೇಳುವ ವಿಜ್ಞಾನಿಗ ಒಳೊ. ಹಸುನೇ ದೇವ್ರೂಂತ ಹೇಳಿ ಹುಟ್ಟಿದರ್‌ಂದ ಸಾಯುವ ವರೆಗೂ ಹಟ್ಟಿಂತ ಹೇಳುವ ಜೈಲ್‌ಲಿ ಹಿಸಿ ಅದೇ ನನ್ನ ಅಮ್ಮಂತ ಹೇಳುವ ಮೊಯ್ಸಿಂಗಳಿಗೆ ಯಾಕೆ ಗೊತ್ತಾದ್ಲೆ. ಪರಿಸರಂತ ಜೀವನಪೂರಾ ಮಾತಾಡವ್ಕೆ ಯಾಕೆ ಇನ್ನೂ ಅರ್ಥ ಆದುಲೆ, ಮೊಯ್ಸಿ ಸ್ವತಂತ್ರ ಆಗಿ, ಸ್ವಚ್ಛಂದ ಆಗಿ ಹೇಂಗೆ ಬೊದ್ಕಿದೆನೋ ಹಾಂಗೇ ಎಲ್ಲಾ ಜೀವಿಗಳಿಗೂ ಬೊದ್ಕ್‌ವ ಹಕ್ಕ್ ಉಟ್ಟೂಂತ. ಒಟ್ಟ್‌ಲಿ ಕುಞ್ಞಣ್ಣನ ಜೀವನಲಿ ಯೋಚನೆನ ತರನೇ ಬದಲಾಗಿ ಹೋಗಿತ್. ಬೊದ್ಕುದಕ್ಕಾಗಿ ಎಲ್ಲ ಪ್ರಾಣಿಗ, ಹಕ್ಕಿಗ, ಮೊಯ್ಸಿರ್ ಹೋರಾಟ ಮಾಡಿವೆ. ಅದ್ ತಪ್ಪಲ್ಲ ಬೊದ್ಕುದಕ್ಕೆ ಎಲ್ಲಾ ಇದ್ದರೂ ಹೀಂಗೆ ಪ್ರಾಣಿಗಳ ಬಂಗ ಯಾಕೆ ಬರ್ಸಿವೇಂತ ತುಂಬಾ ಚಿಂತೆ ಮಾಡ್ತಿತ್. ಅವನ ಜೀವನಲಿ ಒಂದ್ ದೊಡ್ಡ ಬದಲಾವಣೆನ ಆ ಶ್ರೀಮಂತ ಕಾಡ್ ತಂದಿತ್. ಬೊದ್ಕುದೂಂತ ಹೇಳ್ರೆ ನಾವು ಮಾತ್ರ ಬೊದ್ಕುದಲ್ಲಾಂತ ಕಾಡ್ ಅವಂಗೆ ಪಾಠ ಹೇಳಿತ್. ಈಗೀಗ ಚಿಂತನೆಗಳೇ ಬೇರೆ ಕಡೆಗೆ ಮಾಲಿ ಹೋಗಿತ್.

***

ಇಂದ್ ಹಿಂದೆನಾಂಗೆ ಯಾವುದೂ ಇಲ್ಲೆ. ಬೊಡ್ಡಡ್ಕದ ಸುತ್ತು ಮುತ್ತ್ ತುಂಬಾ ಬದಲಾವಣೆ ಆಗುಟು. ಭಾರೀ ಕಾಡಗಳ ಎಲ್ಲಾ ಕಡ್ಟ್ ಜನಂಗ ರಬ್ಬರ್ ಕೃಷಿ ಮಾಡ್ಯೊಳೊ. ಅದುನೂ ಕಾಡ್‌ನಾಂಗೇ ಕಂಡದೆ. ಪ್ರತಿ ಕಾಡ್‌ನಾಂಗೆ ಕಂಡರೂ ಅದರೊಳಗೆ ಹಿಂದೆ ಇದ್ದಂತ ರೀತಿಲಿ ಯಾವುದೂ ಇಲ್ಲೆ. ಇಷ್ಟೆಲ್ಲ ಬದಲಾವಣೆ ಆಕನ ಜನರ ಯೋಚನೆನೂ ಬದಲಾಗುಟು. ಬೆಡಿತಕಂಡ್ ಕಾಡ್ ಹತ್ತುದು ಸರಿಯಲ್ಲಾಂತ ಅರಿವು ಆಗ್ತಾ ಉಟ್ಟು. ಬೆಡಿ ಹಿಡ್ಯವು ಕಡಿಮೆ ಆದಾಂಗೆ ನಿಧಾನಕ್ಕೆ ಪ್ರಾಣಿಗಳ ಸಂಖ್ಯೆ ಜಾಸ್ತಿ ಆಕಂಡುಟ್ಟು. ಅಂದರೂ ತಪ್ಪಿದ ಸಮತೋಲನಂದಾಗಿ ದೊಡ್ಡ ದೊಡ್ಡ ಪೇಟೆ ಪಟ್ಟಣದ ಒಳಗೇ ಆನೆಗ, ಚಿರತೆಗ ತಿರುಗುವಾಂಗೆ ಆಗುಟು. ಇಷ್ಟೆಲ್ಲ ಇದ್ದರೂ ಸರ್ಕಾರದ ಗಟ್ಟಿ ಕ್ರಮಗಳ್‌ಂದಾಗಿ ಒಳ್ದ ಕಾಡ್‌ಗ ಹಾಂಗೇನೇ ಒಳೊ. ಚೋನಪ್ಪಾಡಿ, ದೇಸಮಲೆ, ಪೂಮಲೆ, ಬಂಟಮಲೆ, ಬೇಂಗಮಲೆಗ ಈಗೊಳು ನಿಭಿಡಾರಣ್ಯನೇ ಆಕಂಡ್ ಉಟ್ಟು. ಇಂದ್ ಬಡ್ಡಡ್ಕ ರಾಮಯ್ಯಜ್ಜ ಇಲ್ಲೆ, ಹುಲಿ ಅಪ್ಪಯ್ಯಜ್ಜ ಇಲ್ಲೆ, ಬಾಬಣ್ಣನವೂ ಇಲ್ಲೆ, ಬಡ್ಡಡ್ಕದ ಹೆಮ್ಮೆ ಆಗಿ ಮೆರ್ದಿದ್ದ ಜಿಕೋ ಜರ್ಮನ್ ಬೆಡಿ ಈಗ ಕುಞ್ಞಣ್ಣನ ತಮ್ಮ ರಾಜನ ಹೆಸರ್ಲಿ ಉಟ್ಟು. ಅಪ್ಪಯ್ಯಜ್ಜನ ಮಿಡ್ ಲೇಂಡ್ ಸಡನ್‌ಡೆತ್ ಅವರ ಅಳಿಯ ಚಂಗಪ್ಪಣ್ಣನ ಹಕ್ಕಲೆ ಉಟ್ಟು. ಅವೆರ್ಡ್ ಬೆಡಿಗಳೂ ಅವರವರ ಗತಕಾಲದ ವೈಭವನ ನೆನ್ಸಿಕಂಡ್ ಗೋಡೆಲಿ ನೇತಾಡಿಕಂಡ್ ಒಳೊ. ಹಿಂದೆನಂತ ಅಗತ್ಯ ಬೆಡಿಗಳ್ದ್ ಇಲ್ಲದಿದ್ದರೂ ಬೊದ್ಕುವ ಧೈರ್ಯಕ್ಕಾಗಿ ಅದ್ ಬೇಕೇ ಬೇಕಾದೆ. ಹುಲಿ, ಚಿರತೆ ಇಲ್ಲದಿದ್ದರೂ ಕಳ್ಳಕಾಕರ ಹೆದ್ರಿಸಿಕೆ ಬೆಡಿ ಬೇಕಾದೆ. ಈಗ ಬೇಟೆ ಒಂದ್ ಅಪರಾದ ಆದ ಕಾರಣ ಅದ್ ಹವ್ಯಾಸ ಆಗಿ ಉಳ್ತಲೆ. 1972ರಲಿ ಬಂದ ವನ್ಯಜೀವಿ ರಕ್ಷಣಾ ಅಧಿನಿಯಮ ಹಾಂಗೂ 1980ರಲ್ಲಿ ಬಂದ ಅರಣ್ಯ ಸಂರಕ್ಷಣಾ ಕಾಯಿದೆ ತುಂಬಾ ಕಟ್ಟ್ ನಿಟ್ಟ್‌ಲಿ ಜಾರಿಲಿ ಉಟ್ಟು. ಈ ರಾಜ್ಯ ಕಂಡ ಸುಮಾರ್ ದೊಡ್ಡ ದೊಡ್ಡ ಬೇಟೆಗಾರ್‌ಗ ಅವ್ಕೇ ಗೊತ್ತಿಲ್ಲದಾಂಗೆ ನಿಸರ್ಗ ಪ್ರೇಮಿಗ ಆದೋ, ಪ್ರಾಣಿ ಸ್ನೇಹಿಗ ಆದೋ. ವೈಟ್ ಫೀಲ್ಡ್‌ಲಿ ಇದ್ದ ಕೆನ್ನತ್ ಆ್ಯಂಡರ್‌ಸನ್, ಅವ ಮಂಜ ಜೇಮ್ಸ್, ಜಗಳ್ ಬೇಟೆನ ಮನೋಹರ ಮಳಗಾಂವ್‌ಕರ್, ಬಡ್ಡಡ್ಕದ ಅಪ್ಪಯ್ಯಜ್ಜ ಕೆದಂಬಾಡಿ ಜತ್ತಪ್ಪ ರೈ, ಕೊಡಗ್‌ನ ಕಾಕೆಮಾನಿ (ಬಿ.ಡಿ. ಸುಬ್ಬಯ್ಯ), ಕೈಂತಜೆ ವಿಷ್ಣುಭಟ್, ದೂರದ ಉತ್ತರಾಂಚಲಿ ಇದ್ದ ಜಿಮ್ ಕಾರ್ಬೆಟ್ ಇವು ಯಾರೂ ಮಾಸದ ಆಸೆಗಾಗಿ ಬೆಡಿ ಹಿಡ್ದವು ಅಲ್ಲ. ಬೆಳೆ, ಜಾನುವಾರು ರಕ್ಷಣೆಗೋ, ನರಭಕ್ಷಕ ಹುಲಿ, ಚಿರತೆಗಳಿಂದ ಜೀವ ಉಳ್ಸಿಕಾಗಿ ಬೆಡಿ ಹಿಡ್ದವು. ಒಂದ್ ಹಂತಲಿ ಅವೆಲ್ಲಾ ಬೇಟೆಗಾರ್‌ಗಂತ ಹೆಸರ್ ಪಡ್ದರೆನೂ ಅವೆಲ್ಲವೂ ಮತ್ತೆ ನಿಸರ್ಗನ ಅತಿ ಆಗಿ ಪ್ರೀತಿಸಿದವು, ರಕ್ಷಿಸಿದವು ಆಗಿ ಹೋದೋ. ಸಾಹಿತಿ ಮನೋಹರ

ಮಳಗಾಂವ್‌ಕರ್ ಅಂತೂ ಅವರ ಜೀವಿತದ ಕಟ್ಟ ಕಡೆನ ಹಲವಾರು ವರ್ಷ ಜಗಲ್‌ಬೇಟ್‌ನ ದಟ್ಟ ಕಾಡ್‌ನ ನಡುಲಿ ಬೋರಿಕ್ವಾರಿಂತ ಹೇಳುವ ಜಾಗೆಲಿ ಮನೆಕಟ್ಟಿ ವಾಸ ಆಗಿದ್ದೊ. ಕುಞ್ಞಣ್ಣನ ನೆನ್ಪ್‌ಲಿ ಈಗ ಸಾವಿರ ಸಾವಿರ ಸಂಗತಿಗ ಉಟ್ಟು. ಬಡ್ಡಡ್ಕದ ಮನೆಲಿ ಕುದ್ದ್‌ಕಂಡ್ ಇದೆಲ್ಲ ನೆನ್ಸಿಕಂಡ್ ಇರಿಕನ. ಎದ್‌ರ್‌ನ ಉಂಡೆ ಹಲ್ಸಿನ ಮರಲಿದ್ದ ಹಲ್ಸ್‌ನ ಹಣ್ಣ್‌ನ ತಿಂದ್‌ಕಂಡ್ ಇರುವ ಹೊಟ್ಟಂಗ ಅವನ ಕಂಡ್, ನಿಂಗೆ ನಾವು ಯಾರೂ ಹೆದ್ರುದುಲೇಂತ ಹೇಳಿಕಂಡ್ ಕುಞ್ಞಣ್ಣನ ಮಕ್ಕಾರ್ ಮಾಡುವಾಂಗೆ ಜೋರ್ ಮರ್ಡ್ತಿದ್ದೊ. "ಹೇಂ..ಕ್...ಹ್ಹೆ....ಹ್ಹೆ....ಹೇಂಖ್ಕ್" ಂತ ಅವು ಮರ್ಟರೆ ಕುಞ್ಞಣ್ಣಂಗೆ ನೆಗೆಬರ್ತಿತ್ತ್. ಯಾಕೇಂತ ಹೇಳ್ರೆ ಅದ್ ನೆಗೆನಾಂಗೇ ಕೇಳ್ತಿತ್ತ್. ಕಾಡ್‌ನ ಮಕ್ಕಳೇ ಹಾಂಗೆ. ಅವು ಮರ್ಟರೆನೂ ಬೇರೆವು ಅವು ನೆಗಾಡ್ತ್‌ಂತಳೇ ತಿಳ್ಕಂಡವೆ. ಕುಞ್ಞಣ್ಣನೂ ಈಗ ಕಾಡ್‌ನ ಮಕ್ಕಳೊಟ್ಟಿಗೆ ಮಂಜ ಆಗಿ ಹೋಗಿತ್ತ್.

***

ಋತು ಚಕ್ರ ತಿರುಗುವುದು, ಕಾಲನೆದೆ ಮರಗುವುದು।
ಮೃತನ ಮಣ್ಣಿಂದ ಹೊಸ ಹುಲ್ಲು ಮೊಳೆಯುವುದು॥
ಕ್ಷಿತಿಗರ್ಭ ಧರಿಸುವಳು, ಮತ್ತುದಿಸುವುದು ಜೀವ।
ಸತತ ಕೃಷಿಯೋ ಪ್ರಕೃತಿ ಮಂಕುತಿಮ್ಮ॥

–ಡಿ.ವಿ.ಜಿ.

***

# ಬರ್ದ್ ಮುಗ್ಸಿದ ಮೇಲೆ...

"ಕಾಡ್‌ನ ಮಕ್ಕ" ಈ ಪುಸ್ತಕನ ಬರ್ಯಕೆ ಸುರು ಮಾಡಿಕಾಕನ ನನ್ನ ಎದುರ್ಲಿ ಸ್ಪಷ್ಟ ಕಲ್ಪನೆ ಏನೂ ಇತ್ತಲೇಂತಳೇ ಹೇಳಕ್ - ಸುಮಾರ್ ಸಮಯಂದ ಏನಾರ್ ಬರ್ಯೊಕು ಬರ್ಯೊಕೂಂತ ಆದರೂ ಎಂತದ್‌ಂತ ಗೊತ್ತಾಗಿತ್ತ್‌ಲೆ. ಆದರೆ ಒಂದ್ ವಿಷಯ ಮನ್ಸ್‌ಲೇ ಇತ್ತ್. ಅದ್ ಏನ್‌ಂತ ಹೇಳ್ರೆ... ನಾ ಬರಿವಂತದ್ ನನ್ನ ಸುತ್ತ್‌ದಾಗಿರೊಕು, ನನ್ನ ಅನುಭವದ ನೆಲೆಯೊಳಗೇ ಇರುವ ವಿಷಯ ಆಗಿರೊಕೂಂತ ಯೋಚಿಸಿಕಂಡ್ ಇರಿಕನ ಒಮ್ಮೆನೇ ನೆನ್ಪಾದ್ ನನ್ನ ಸುತ್ತ್‌ನ ಪರಿಸರ. ಈ ದಟ್ಟ ಕಾಡ್‌ನ ನಡುಲಿ ಹಿಂದೆನ ಕಾಲಲಿ ನನ್ನಜ್ಜ, ಅವರಜ್ಜ ಎಲ್ಲಾ ಹೇಂಗೆ ಬೊದ್ಕಿದ್ದಿರುವೊನೋ..., ಆ ಕಾಲ ಹೇಂಗಿದ್ದಿರ್ದು...? ಅದರ ಬಗ್ಗೆ ಸೊಲ್ಪ ಆದರೂ ಬರ್ಯಕೆ ಸಾಧ್ಯ ಆದನೋಂತ ಅನ್ಸಿತ್. ಅಂದ್‌ನ ದಿನಗಳಲಿ ಇಲ್ಲಿ ಬೊದ್ಕಿ ಬಾಳ್ದ ನನ್ನ ಸುತ್ತ್ ಮುತ್ತ್‌ನ ಹಿರಿಯರ ಬಗ್ಗೆ ಏನಾರ್ ಗೊತ್ತಿರುವಂತದ್ ಬರ್ದದೇ ಆದರೆ ಅದೊಂದ್ ದಾಖಲೆ ಆಗಿ ಉಳಿದೋಂತ ನಂಬಿಕೆಲಿ ನಾ ಇದರ ಸುರು ಮಾಡ್ದೆ. ಬರ್ಕಂಡ್ ಹೋದಾಂಗೆ ಯಾವುದೋ ಒಂದ್ ಸಮಯಲಿ ನನ್ನ ಎದುರ್‌ಲಿ ಒಂದ್ ಪ್ರಶ್ನೆ ಎದ್ದ್ ನಿತ್ತಿತ್ತ್. ಏನ್‌ಂತ ಹೇಳ್ರೆ; ಬರವಣಿಗೆ ಮುಂದೆ ಮುಂದೆ ಸಾಗಿದಾಂಗೆ ನಾಯಾಕೋ ಬೇಟೆನ ವೈಭವೀಕರಿಸಿ ಬರೀತಾ ಒಳೆನೋಂತ ಅನ್ನಿಕೆ ಸುರು ಆತ್. ಇಲ್ಲೆ! ಅದರ್‌ಂದ ಆಚೆನೂ ತುಂಬಾ ಸತ್ಯಗ ಹೊರ ಜಗತ್ತ್‌ನ ಗೋಚರಕ್ಕೆ ಬಾರದೇ ಉಳ್ದುಟೂಂತ ನಂಗೆ ಗೊತ್ತಿತ್ತ್. ಹೌದು, ನನ್ನ ನಡೆಗೆ ಸಮರ್ಥನೆ ಉಟ್ಟೂಂತ ಬರಿದೊರ ಮುಂದುವರ್ಸಿದೆ.

ನಾ ಕಂಡಿದ್ದೆ, ಕೇಳಿದ್ದೆ. ನನ್ನ ಅಜ್ಜನ ತಮ್ಮ ಅಪ್ಪಯ್ಯ ಗೌಡ್ರ ಬೇಟೆಗಳ ಬಗ್ಗೆ. ಜೀವಿತಾವದಿಲೇ ದಂತಕತೆ ಆಗಿದ್ದ ಅವರೊಟ್ಟಿಗೇ ನಾನೂ ನಡ್ದಾಡ್ದ ದಿನಂಗ ಇದ್ದೊ. ಅವರ ಬಾಯಿಂದಲೇ ಅವರ ಕತೆಗಳ ಕೇಳಿ ಗೊತ್ತಿತ್ತ್. ಅಂದ್‌ನ ಇಂತಾ ದಿನಲಿ ಕನ್ನಡದ ಮಾಸಪತ್ರಿಕೆ ಒಂದರ್ಲಿ ಅಪ್ಪಯ್ಯ ಗೌಡರ ಬೇಟೆನ ಬಗ್ಗೆ ಡಾ। ಚಿನ್ನಪ್ಪಗೌಡ ಬರ್ದ ಕತೆನೊಂದರ ಓದಿದ್ದೆ. ಅದಾದ ಸೊಲ್ಪನೇ ಸಮಯಲಿ ಡಾ। ಪ್ರಭಾಕರ ಶಿಶಿಲರ್ "ಶಿಕಾರಿಯ ಸೀಳುನೋಟ" ದ ಹೆಸರ್ಲಿ ಅಪ್ಪಯ್ಯಗೌಡ್ರ ಬೇಟೆನ ಅನುಭವನ ಪುಸ್ತಕ ರೂಪಲಿ ಹೊರತಂದೊ. ಆ ಪುಸ್ತಕಲಿ ಅಪ್ಪಯ್ಯ ಗೌಡ್ರ ಬಗ್ಗೆ ನಾ ಬರ್ದ ಕವನನೂ ಒಂದ್ ಇತ್ತ್. ಆ ಪುಸ್ತಕದ ಬುಡ್ಡಗೆ

ಸಮಾರಂಭ ಬಡ್ಡಡ್ಕಲಿ ಅಪ್ಪಯ್ಯಗೌಡ್ರೆ ಕಟ್ಟಿ ಬೆಳ್ಸಿದ "ರಾಮಕೃಷ್ಣ ಏಡೆಡ್ ಹೈಯರ್ ಪ್ರೈಮರಿ ಶಾಲೆ" ಲಿ ನಡ್ದಿತ್ತ್. ಹಿರಿಯ ಲೇಖಕ, ಬೇಟೆಗಾರ ಕೆದಂಬಾಡಿ ಜತ್ತಪ್ಪ ರೈಯವು ಪುಸ್ತಕನ ಬುಡ್ಗಡೆ ಮಾಡಿದ್ದೊ. ಅಂದ್ ಆ ಸಮಾರಂಭಲಿ ನನ್ನ ಒಟ್ಟಿಗೆ ಇದ್ದ ನನ್ನ ದೋಸ್ತಿ ಡಾ। ನಾಗರಾಜ್‌ಂತ ಹೇಳವು ನಂಗೊಂದ್ ಪ್ರಶ್ನೆ ಕೇಳಿದ್ದೊ. ಯಾಕ್ರೀ ತೇಜ.. ನೀವೇ ಇದನ್ನ ಬರೀಬಹುದಿತ್ತಲ್ಲಾಂತ. ಆ ಕ್ಷಣಕ್ಕೆ ಅವ್ಕೆ ಏನ್ ಉತ್ತರ ಕೊಟ್ಟೆನೋ ಗೊತ್ತಿಲೆ. ಆದರೆ ಆ ಪ್ರಶ್ನೆ ನನ್ನ ಮನ್ಸ್‌ಲಿ ನಾಟಿ ಹೋಗಿತ್ತ್. ಅಂದ್‌ನ ದಿನಲಿ ನನ್ನ ಮಿತಿ ನಂಗೇ ತಿಳ್ದಿತ್ತ್. ಕಾಲ ಯಾಗೊಳೂ ಒಂದೇ ರೀತಿ ಇರ್ದುಲೆ. ಆದರೆ ಇಂದ್ ಅನ್ಸಿದೆ ಅಂದ್‌ನ ದಿನಲಿ ನಂಗೇ ನನ್ನ ಮಿತಿ ಗೊತ್ತಿತ್ತೆನೋಂತ. ಅದ್ ಹೇಂಗಿದ್ದರೂ, ಇಂದ್ ನಾ ಬರ್ದದ್ ಈ ಪುಸ್ತಕಲಿ ಒಬ್ಬ ಅಪ್ಪಯ್ಯ, ಒಬ್ಬ ರಾಮಯ್ಯ ಅಥವಾ ಒಬ್ಬ ಬಾಬಣ್ಣರ ಬಗ್ಗೆ ಅಲ್ಲ. ನಾ ಬರ್ದದ್ ಬರೀ ಕೆಲವರ ಬಗ್ಗೆ ಅಲ್ಲ. ನಾ ಬರ್ದದ್ ಒಂದ್ ಕಾಲದ ಜೀವನದ ಬಗ್ಗೆ, ನಂಗೆ ಕಾಂಬಕೆ ಸಿಕ್ಕಿದ ಕಾಡ್‌ಗಳ ಬಗ್ಗೆ, ಅದರೊಟ್ಟಿಗೇ ಬಾಳಿಬೊದ್ಕಿದವರ ಬಗ್ಗೆ.

ಕಾಲ ಬಾರೀ ವಿಚಿತ್ರ. ಇಂದ್ ತಿಳ್ದ ಸತ್ಯ ನಾಳೆಗೆ ಸುಳ್ಳಾಗಿದ್ದದೆ, ಇಂದ್‌ನ ಸುಳ್ಳ್ ನಾಳೆ ಸತ್ಯನೂ ಆಗಿದ್ದದೆ. ನನ್ನ ಈ ಪುಸ್ತಕಲಿ ಬೇಟೆನೇ ಪ್ರಧಾನ ಆಗಿ ಕಂಡರೂ, ನಂಗೆ ಗೊತ್ತುಟು ಅದ್ ಸರ್ವಕಾಲಿನ ಸತ್ಯ ಅಲ್ಲಾಂತ. ಒಂದ್ ಕಾಲಲಿ ಬೇಟೆನೇ ಜೀವನಾಂತ ತಿಳ್ದ್ ಬೊದ್ಕಿದ, ಜೀವಿತ ಕಾಲಲೇ ಕತೆ ಆಗಿ ಮೆರ್ದ್ ಹುಲಿ ಅಪ್ಪಯ್ಯಗೌಡಂತ ಹೆಸರ್ ತೆಗ್ದವು ಹಾಂಗೇ ಆಗಿ ಉಳ್ಯದೇ ಶಾಲೆ ಒಂದ ಕಟ್ಟಿ, ಬೆಳ್ಸಿ ಮೆನೇಜರ್ ಅಪ್ಪಯ್ಯ ಗೌಡಾಂತ ಆಗಿದ್ದೊ. ವಿದ್ಯೆನ ಮೇಲೆ ಅವ್ಕೆ ಇದ್ದ ಗೌರವಂದಾಗಿ ಶಾಲೆನೊಂದರ ಸ್ಥಾಪಿಸಿದ್ದೋ. ಬಡ್ಡಡ್ಕದ ಸುತ್ತ್‌ನ ಪರಿಸರಲಿ ಅವೊಬ್ಬ ಪೂಜಿತ ವ್ಯಕ್ತಿ ಆಗಿ ಬಾರೀ ದೊಡ್ಡ ಮಟ್ಟಕ್ಕೆ ಬೆಳ್ದ್ ನಿತ್ತಿದ್ದೊ. ಇಂತದ್ದ್ ಅವರೊಬ್ಬರ್‌ದ್ ಮಾತ್ರ ಅಲ್ಲ. ಪ್ರಾರಂಭಲಿ ಬಾರೀ ಬೇಟೆಗಾರ ಆಗಿ, ತುಂಬಾ ಪ್ರಸಿದ್ಧಿ ಪಡ್ದ ಮುಂದೆನ ದಿನಲಿ ಪ್ರಕೃತಿನ ಅತಿ ಆಗಿ ಪ್ರೀತಿಸಿ ಬೊದ್ಕಿದ ಎಷ್ಟೋ ಸತ್ಯಗ ನಮ್ಮ ಮುಂದೆ ಉಟ್ಟು, ಅಂತದೊಂದ್ ಬದಲಾವಣೆಲಿ ಬೊದ್ಕ್‌ತಿದ್ದ ಮಹಾನ್ ವ್ಯಕ್ತಿನ ಹಕ್ಕಲೆಂದ ನೋಡುವ ಯೋಗ ನಂಗೂ ಬಂದಿತ್ತ್.

ಉತ್ತರ ಕನ್ನಡ ಜಿಲ್ಲೆಲಿ ಜೋಯಿಡಾ (ಹಳೇ ಸೂಫಾ) ತಾಲ್ಲೂಕ್‌ನ ಒಂದ್ ಸಣ್ಣ ಪೇಟೆ ಜಗಲ್‌ಬೇಟ್ (ಜಗಲ್‌ಪೇಟೆ, ಜಗಲ್ ಬೆಟ್ಟ) ಅಲ್ಲಿ ನಾ ಗಣಿ ಗುತ್ತಿಗೆದಾರ

ಆಗಿ ವಾಸ ಇದ್ದ ಸಂದರ್ಭಲಿ ಒಬ್ಬ ವ್ಯಕ್ತಿ ನನ್ನ ಗಮನನ ವಿಶೇಷ ಆಗಿ ಸೆಳ್ದಿದ್ದೊ. ದಿನಾ ಬೊಳ್ಳುನ ಹೊತ್ತ್ ಮತ್ತೆ ಹಿಂಬತ್ ಕೈಲಿ ಹಂಟರ್ ಹಿಡ್ದ್ ಮುಧೋಳ ನಾಯಿನೊಂದರ ಒಟ್ಟಿಗೆ ಕರ್ಕಂಡ್ ವಾಕಿಂಗ್ ಹೋಗ್ತಾ ಇದ್ದ ವ್ಯಕ್ತಿ ಒಬ್ಬರ ನೋಡ್ತಾ ಇದ್ದೆ. ಅಜಾನುಬಾಹು, ಆ ಊರ್‌ಗೆ ಸರಿಹೊಂದದ ಬಟ್ಟೆಬರೆ. ತುಂಬಾ ವಿದ್ಯಾವಂತರಾಂಗೆ ಕಾಂಬತಿದ್ದೊ. ಅವು ನಡ್ಕಂಡ್ ಬಾಕನ ಅವರ ಕಂಡವು ಎದ್ದ್ ನಿತ್ತ್ ಗೌರವ ಕೊಡ್ತಿದ್ದೊ. ಆ ಮರ್ಯಾದೆನ ನೋಡಿಕನ ಅವು ಯಾರೋ ದೊಡ್ಡ ಮನ್ಶ ಆಗಿರೊಕೂಂತ ಎದ್ದ್ ಕಾಣ್ತಿತ್ತ್. ಅವರ ನಡೆಲಿ ಇಂಗ್ಲಿಷ್ ಮರ್ಜಿ ಇತ್ತ್. ರಾಜ ಗಾಂಭೀರ್ಯ ಇತ್ತ್. ಹೌದು! ನಾ ನೆನ್ಸಿದ್ದ್ ಸರಿಯಾಗಿನೇ ಇತ್ತ್. ಅವೇ ಗೋವಾ ಮೂಲದ ರಾಜವಂಶಸ್ತ ವೃತ್ತಿಪರ ಮಹಾಬೇಟೆಗಾರ ಆಗಿದ್ದ ಶ್ರೀಯುತ ಮಹೋಹರ ಮಳಗಾಂವ್‌ಕರ್. ಆ ಹೆಸರ್‌ನ ಕೇಳಿಕಾಕನನೇ ನಂಗೆ ರೋಮಾಂಚನ ಆಗಿತ್ತ್. ಅವರ ಬಗ್ಗೆ ಓದಿದ್ದೆ. ಅದ್ ಬರೇ ಅವರ ಬೇಟೆಗಳ ಜೀವನದ ಬಗ್ಗೆ ಮಾತ್ರ ಅಲ್ಲ. ಅವು ಎರಡನೇ ಮಹಾಯುದ್ಧದ ಕಾಲಲಿ ಸೇನೆಲಿ ಲೆಫ್ಟಿನೆಂಟ್ ಕರ್ನಲ್ ಹುದ್ದೆಲಿದ್ದವು. ಸ್ವತಂತ್ರ ಪಕ್ಷದ ಪರವಾಗಿ ಎರಡ್ ಸರ್ತಿ ಲೋಕಸಭಾ ಚುನಾವಣೆಗೆ ನಿಂತವು. 1913 ನೇ ಇಸವಿಲಿ ಹುಟ್ಟಿದ ಅವು ಬೊಂಬ್ಯಾ ಯುನಿವರ್ಸಿಟಿಲಿ ಇಂಗ್ಲಿಷ್ ಮತ್ತೆ ಸಂಸ್ಕೃತಲಿ ಪದವಿ ಮುಗ್ಸಿದ ಮೇಲೆ ಕೈಲಿ ಬೆಡಿನ ತೆಕಂಡೊ. ಹವ್ಯಾಸಿಯಾಗಿ ಬೇಟೆನ ಪ್ರಾರಂಭಿಸಿರೂ, ವೃತಿಪರರೋಂತ ಹೇಳುವ ಮಟ್ಟಕ್ಕೆ ಬೇಟೆಗಳ ಆಯೋಜಿಸುವವರೆಗೆ ಮುಂದುವರ್‌ದೊ. ಅಂದ್‌ನ ದಿನಲಿ ಅವ್ ಎಷ್ಟ್ ಪ್ರಸಿದ್ಧಿ ಹೊಂದಿದ ಬೇಟೆಗಾರ ಆಗಿದ್ದೋಂತ ಹೇಳ್ರೆ ಆಶ್ಚರ್ಯ ಆದೆ. ಸೂಫಾ, ಉಳವಿ, ಕುರಂಡಿ, ಜಗಲ್‌ಬೇಟ್, ಸಿದ್ದಿ ಅಸು, ಅನ್‌ಮೋಡ್, ಜಾಂಬೋಟಿ ಕಾಡ್‌ಲಿ ಅವು ಹೊಡ್ದ ಹುಲಿಗಳಿಗೆ ಲೆಕ್ಕನೇ ಸಿಕ್ಕಿಕಿಲೆ. ಅದ್ ಹೇಂಗಿದ್ದರೂ ಅಧಿಕೃತ ದಾಖಲೆಲಿ ಎಂಟ್ ನರಭಕ್ಷಕ ಹುಲಿ, ಇಪ್ಪತ್ತಕ್ಕೂ ಹೆಚ್ಚ್ ಚಿರತೆಗಳ ಬೇಟೆಯಾಡ್ದ್ ಕಂಡ್‌ಬಂದದೆ. ಅಂತ ವ್ಯಕ್ತಿ ಅವರ ನಲವತ್ತೇಳನೇ ವಯಸ್ಸ್‌ಲಿ ಒಮ್ಮೆನೇ ಬರವಣಿಗೆ ಪ್ರಾರಂಭಿಸಿದೊ. ಅದ್ ಅವರ ಬದುಕ್‌ನ ಬಾರೀ ದೊಡ್ಡ ಪ್ರಾರಂಭ ಆಗಿತ್ತ್. ಅಲ್ಲಿಂದ ಸುಮಾರ್ ಎಪ್ಪತ್ತರ ದಶಕದ ಅವಧಿನವರೆಗೆ ಅವು ಬರ್ದ ಆರ್ ಇಂಗ್ಲಿಷ್ ಕಾದಂಬರಿಗ ಅವರ ಬಾರೀ ಉನ್ನತ ಶ್ರೇಣಿಗೇರ್ಸಿತ್. ನಮ್ಮ ಭಾರತ ಕಂಡ ತುಂಬಾ ಮೇಲ್ಮಟ್ಟದ ಐದ್ ಜನ ಇಂಗ್ಲಿಷ್ ಬರಹಗಾರ್‌ಲಿ ಅವುನೂ ಒಬ್ಬ. ದೇಶ ಕಂಡ ಈ ಮಹಾನ್ ಲೇಖಕ ಅವರ ಜೀವಿತದ ಇಳಿಪ್ರಾಯಲಿ ಜಗಲ್‌ಬೇಟ್ ಊರ್‌ನ ಪಕ್ಕಲಿ ಬೋರಿಕ್ವಾರಿ ಎಂಬ

ಜಾಗೆಲಿ, ದಟ್ಟ ಕಾಡ್‌ನ ನಡುಲಿ ಬಂದ್ ಮನೆಕಟ್ಟಿ ಪ್ರಕೃತಿನ ಒಂದ್ ಭಾಗದಾಂಗೆ ಬೊದ್ಕ್‌ತಿದ್ರೊ. ಅವರ ಕಂಡದ್, ಮಾತಾಡ್ದ್, ಗುರ್ತ್‌ನವ ಆದ್ ಎಲ್ಲನೂ ನನ್ನ ಜೀವನ ಅತ್ಯಂತ ಆಶ್ಚರ್ಯಕರ ಮತ್ತು ಒಳ್ಳೆ ಕ್ಷಣಗಾಂತ ತಿಳ್‌ಕಂಡೊಳೆ. ಅವರ ಪರಿಚಯ ಆದ ಮೇಲೆ, ಅವರ ಹಕ್ಕಲೆಂದ ತಿಳ್ಕಂಡ ನಂಗೆ ನನ್ನ ಚಿಂತನೆಗಳೇ ಬದಲಾಕೆ ಸುರಾತ್. ನಾ ಕಂಡದ್ದೆಲ್ಲಾ ಸತ್ಯಗಳೇ ಅಲ್ಲಂತಳೂ, ಸುಳ್ಳ್‌ಂತ ತಿಳ್ದದರಲೂ ಸತ್ಯಗ ಉಟ್ಟೂಂತ ತಿಳ್ಯಕೆ ಪ್ರಾರಂಭ ಆತ್. ಒಬ್ಬ ರಾಜವಂಶಸ್ತ, ಹುಟ್ಟಾ ಬೇಟೆಗಾರ ಅಂತಾ ಕಾಡ್‌ಲಿ ಒಂದಾಗಿ ಬೊದ್ಕಿ, ಅದರ ಉಳ್ಸಿಕೆ ಅವರ ಜೀವನದ ಕಡೆತನಕನೂ ಶ್ರಮಿಸಿದೊ. ಕನ್ನಡ ಮಣ್ಣ್‌ನ ಈ ವ್ಯಕ್ತಿ 2010ನೇ ಇಸ್ವಿಲಿ ಅವರ ಪ್ರೀತಿನ ನೆಲ ಉತ್ತರಕನ್ನಡದ ಬೋರಿಕ್ವಾರಿಲಿ ಮೊಣ್ಣಲಿ ಮೊಣ್ಣಾಗಿ ಹೋದೊ. ಅವರ ಕಾಯ ಅಲ್ಲಿ ಮೊಣ್ಣಾಗಿ ಹೋತಷ್ಟೆ. ಅವರ ಹೆಸರ್‌ಗೆ ಎಂದೂ ಸಾವಿಲ್ಲೆ.

ಉತ್ತರ ಕನ್ನಡ ಜಿಲ್ಲೆನ ಧಾಂಡೇಲಿ ದಟ್ಟ ಕಾಡ್‌ನ ಬಗ್ಗೆ ಬರೀ ನನ್ನ ತೀರದ ದಾಹಕ್ಕಾಗಿ ಬರ್ದದ್‌ಂತಳೇ ಹೇಳಕ್. ಯಾಕೇಂತ ಹೇಳ್ರೆ ಆ ಕಾಡ್‌ನ ವರ್ಣಿಸಿಕೆ ನನ್ನಲ್ಲಿ ಶಬ್ದಗಳೇ ಇಲ್ಲೆ. ಅಲ್ಲಿ ನಾ ಇದ್ದದ್ದ್ ಎರ್ಡ್ ವರ್ಷಗ ಮಾತ್ರ. ಅದ್ ನನ್ನ ಜೀವನ ಕಾಲದ ಸೌಭಾಗ್ಯ ಆಗಿತ್ತ್.

ಒಂದ್ ಕಾಡ್ ಹೇಂಗೆ ಇರ್ದು, ಹೇಂಗೆ ಇರೊಕೂಂತ ಮನ್ಸಗೆ ಬಂದರೆ ನಂಗೆ ನೆನ್ಪಾದು ಧಾಂಡೇಲಿನ ಆ ಕಾಡ್‌ಗ, ಅದೊಂದ್ ನಿಗೂಢ ಕಾಡ್. ಅದರೊಳಗೆನ ಸಂಪತ್ತ್ ಗೊತ್ತಿರವುಕೆ ಮಾತ್ರ ಗೊತ್ತ್. ಅಂತಾ ಕಾಡ್‌ಲಿ ಮನುಷ್ಯ ಸಂಸಾರ ವಿರಳ ಇದ್ದ ಮುಖ್ಯರಸ್ತೆಂದ ಒಳಗೆ ಸುಮಾರ್ ಹತ್ತ್ ಮೈಲ್ ದೂರಲಿ ನಮ್ಮದೊಂದ್ ಗಣಿಗಾರಿಕೆ ಜಾಗೆ ಇತ್ತ್. ಅಲ್ಲಿಗೆ ಹೆಸರ್ ಸಿದ್ದಿ. ಅಲ್ಲಿ ನಾ ಕಂಡ ಖನಿಜ ಸಂಪತ್ತ್ ಅಪಾರ. ನಾವುಗಿದ್ದದ್ದ್ ಮ್ಯಾಂಗನೀಸ್ ಗಣಿ. ಅದಲ್ಲದೇ ಬೇರೆ ಬೇರೆ ಖನಿಜಗಳೂ ಅಲ್ಲಿ ಇತ್ತ್. ಅದೆಲ್ಲ ವಿವರಿಸಿಕೆ ಸಾಧ್ಯ ಆದುಲೆ, ಸರಿನೂ ಅಲ್ಲ. ಹಾಂಗಿದ್ದರೆನೂ ನಮ್ಮ ಗಣಿಗಾರಿಕೆಲಿನೇ ನಾ ಕಂಡ ವಿಚಿತ್ರಗ ಇತ್ತ್. ಅದೂ ಮ್ಯಾಂಗನೀಸ್‌ಲೇ. ನಾವುಗಿದ್ದದ್ ಮಿಡಿಯಂ ಗ್ರೇಡ್ ಮ್ಯಾಂಗನೀಸ್ ತೆಗಿವ ಹಕ್ಕ್. ಆದರೆ ಅಲ್ಲಿ ಹೈಗ್ರೇಡ್, ಸೂಪರ್ ಹೈ ಗ್ರೇಡ್ ಪೌಡರ್ ಮ್ಯಾಂಗನೀಸ್‌ನೂ ಇತ್ತ್. ಅದೆಲ್ಲಾ ಇನ್ನೂ ಅಲ್ಲೇ ಇರ್ದುಂತ ನಂಬಿಯೊಳೆ. ಅದ್ ಹಾಂಗೆ ಉಳ್ದಿರ್ಲಿಂತ ನನ್ನಾಸೆ. ಹೌದು ಹಾಂಗೆ ಉಳಿಯೊಕು. ಭೂಮಿನ ಆಳ ಒಂದ್ ಹಿರಣ್ಯಗರ್ಭ.

ನನ್ನ ಈ ಪುಸ್ತಕಲಿ ಶ್ರೀ ಕೆನ್ನೆತ್ ಆ್ಯಂಡರ್‌ಸನ್‌ರ ಹೆಸರೂ ಬಂದುಟು.

ಅವರ ಬಗ್ಗೆನೂ ಇಲ್ಲಿ ಹೇಳ್ದು ಅವಶ್ಯಕ. ಬೆಂಗಳೂರ್‌ನ ವೈಟ್‌ಫೀಲ್ಡ್‌ಲಿ ವಾಸಮಾಡಿಕಂಡಿದ್ದ ಅವು ಮೂಲತಃ ಸ್ಕಾಟ್ಲೆಂಡ್ ದೇಶದವು. ಅವರ ಅಜ್ಜನ ತಲೆಮಾರ್‌ಂದ ಹಿಂದೇನೇ ಅವು ಭಾರತಕ್ಕೆ ಬಂದವು. ಅವರ ಅಪ್ಪ ಪೂನಾಲಿ ಬ್ರಿಟಿಷ್ ಸೇನೆಲಿ ಕ್ಯಾಪ್ಟನ್ ಆಗಿದ್ದೊ. ಅವರೊಟ್ಟಿಗೆ ಒಂದ್ ರೈಫಲ್ ಇತ್ತ್. ರಜೆ ದಿನಲಿ ಅವರ ಹವ್ಯಾಸ ನೀರ್ ಹಕ್ಕಿಗಳ ಬೇಟೆ ಆಡ್ದು. ಬಾತು, ಹೆಬ್ಬಾತು ಟೀಲ್ಸ್‌ನಂತ ಹಕ್ಕಿಗಳ ಅವು ಬೇಟೆ ಆಡ್ತಿದ್ದೊ. ಅದರ್ನೇ ನೋಡಿಕಂಡ್ ಬೆಳ್ದ ಆ್ಯಂಡರ್‌ಸನ್‌ಗೆ ಅಪ್ಪನ ಕೆಲ್ಸಂದಳೂ ಹೆಚ್ಚ್ ಆಕರ್ಷಣೆ ಆದ್ದ್ ಅಪ್ಪನ ರೈಫಲ್. ಅಂದ್‌ನ ಆ ಆಕರ್ಷಣೆನೇ ಮುಂದೆ ಅವರ ಬಾರೀ ಪ್ರಸಿದ್ಧಿಗೆ ತಂದ್ ನಿಲ್ಸಿತ್ತ್. ಕರ್ನಾಟಕ ಕಂಡ ಯಾವುದೇ ಬೇಟೆಗಾರಂದಳೂ ಹೆಚ್ಚಿಗೆ ಹೆಸರ್ ತೆಗ್ದವು ಅವು ಆಗಿದ್ದೊ. ಅವರ ಒಂದೇ ಒಂದ್ ಸರ್ತಿ ನೋಡುವ ಭಾಗ್ಯ ನಂಗೂ ಬಂದಿತ್ತ್. ಮಾಸಲ್ ಬಣ್ಣದ ಟೀ ಶರ್ಟ್ ಹಾಕಿಕಂಡ್ ಸೈಕಲ್ ಮೆಟ್ಟಿಕಂಡ್ ಹೋಗ್ತಾ ಇದ್ದ ಬಿಳಿನ ಮೊನ್ಶನ ಒಬ್ಬನ ತೋರ್ಸಿ ನನ್ನ ಅತ್ತೆ "ನೋಡು ಮಗನೇ ಅವರೇ ಕೆನ್ನತ್ ಆ್ಯಂಡರ್‌ಸನ್"ಂತ ನಂಗೆ ಹೇಳಿದ್ದೊ. ಅವೇನೋ ತೋರ್ಸಿದೊ. ಆದರೆ ಅಲ್ಲಿವರೆಗೆ ನಾ ಅಂತದೊಂದ್ ಹೆಸರೇ ಕೇಳಿತ್ಲೆ. ಅಂದರೂ ಅವರೊಟ್ಟಿಗೆ ಅವು ಯಾರ್‌ಂತ ಕೇಳ್ದೆ. ಮತ್ತೆ ಹೇಳ್ನೆಂತ ಹೇಳ್ದ ಅತ್ತೆ ಮನೆಗೆ ಬಂದ ಕೂಡ್ಲೆ ಪುಸ್ತಕ ಒಂದರ ಕೊಟ್ಟ್ ಇದರ ಓದ್‌ಂತ ಹೇಳ್ದೊ. ಅದರ ನೋಡ್ದೆ ಅದೇ ಕೆನ್ನತ್ ಆ್ಯಂಡರ್‌ಸನ್‌ರ "ಬ್ಲೇಕ್ ಪ್ಯಾಂಥರ್ ಆಫ್ ಶಿವನಪಳ್ಳಿ" ನೋಡಿಕನ ತುಂಬಾ ಖುಷಿ ಆದರೂ ಓದಿಕೆ ಸುರುಮಾಡ್ರೆ ಓದ್ ಸರೀ ಮುಂದ್‌ವರ್ತ್‌ಲೆ. ಯಾಕೇಂತೇಳ್ರೆ ಇಂಗ್ಲಿಷ್ ಪುಸ್ತಕ ಓದ್‌ವಷ್ಟ್ ನನ್ನ ಇಂಗ್ಲಿಷ್‌ಗೆ ಆಗ ಸಾಮರ್ಥ್ಯ ಇತ್ಲೆ. ಮತ್ತೆ ಒಂದೆರ್ಡ್ ದಿನಲೇ ಅದೇ ಪುಸ್ತಕದ ಕನ್ನಡದ ಅನುವಾದ "ಶಿವನಪಳ್ಳಿಯ ಕಪ್ಪು ಚಿರತೆ" ಓದಿದೆ. ಅದೊಂದೇ ಪುಸ್ತಕಂದ ನನ್ನ ಗಮನ ಅವರ ಮೇಲೆ ಬೀಳುವಾಂಗೆ ಆತ್. ಅವರ ತುಂಬಾ ಬೇಟೆ ಅನುಭವಗಳ ಓದಿದೆ. ಆದರೆ ನಂಗೆ ಅವರ ಮತ್ತೆ ನೋಡುವ ಅದೃಷ್ಟ ಬಾತೇ ಇಲ್ಲೆ. ಅವು ನರಭಕ್ಷಕನಾಗಿ ಗುರ್ತಿಸಿಕಂಡಿದ್ದ ಸುಮಾರ್ 8 ಚಿರತೆಗಳ, 7 ಹುಲಿಗಳ ಹೊಡ್ದದ್ 1939ನೇ ಇಸ್ವಿಂದ 1966 ಇಸ್ವಿವರೆಗೆ ದಾಖಲಲಿ ಕಂಡ್‌ಬಂದದೆ. ಅದ್ ಕೇವಲ ಅಧಿಕೃತ ಮಾತ್ರ. ಆದರೆ ಸುಮಾರ್ 18 ನರಭಕ್ಷಕ ಚಿರತೆ, ಇಪ್ಪತ್ತಕ್ಕೂ ಹೆಚ್ಚ್ ನರಭಕ್ಷಕ ಹುಲಿಗಳ ಬೇಟೆಯಾಡಿಯೊಳೊ. ಅದಲ್ಲದೇ ಕೇಡಿಗ ಆನೇಂತ ಗುರ್ತಿಸಿಕಂಡಿದ್ದ ನರಹಂತಕ ಆನೆಗಳನ್ನೂ ಬೇಟೆ ಮಾಡಿಯೊಳೊ. ಅವರ ಜೀವಿತ ಕಾಲಲಿ ಆಗನ ಮೈಸೂರು ರಾಜ್ಯ ಮತ್ತೆ ಮದ್ರಾಸ್

ಪ್ರಾಂತ್ಯಲಿ ಎಲ್ಲಿಯೇ ನರಭಕ್ಷಕ ಹುಲಿ, ಚಿರತೆಗ ಕಂಡ್‌ಬಂದರೆ ಸರ್ಕಾರನೇ ಅವರ ಬೇಟೆ ಮಾಡಿಕೆ ಅನುಮತಿಕೊಟ್ಟ್ ಕರ್ಯ್ತಿದ್ದೊ. ಒಂದ್ ರೀತಿಲಿ ಜೀವನಲಿ ಬೇಟೆನನೇ ವೃತ್ತಿ ಆಗಿ ತೆಕಂಡಿದ್ದ ಅವು ಸ್ವತಾ ಒಳ್ಳೆ ಬರವಣಿಗೆ ಕಾರನೂ ಹೌದು. ಅವರ್ದೇ ಬೇಟೆನ ಅನುಭವಗಳ ಪುಸ್ತಕ ರೂಪಕ್ಕೆ ತಂದ್ ಯಶಸ್ವೀ ಬರಹಗಾರನೂ ಆಗಿ ಮತ್ತೂ ಹೆಚ್ಚ್‌ನ ಪ್ರಸಿದ್ಧಿಗೆ ಬಂದೊ. ಆದರೆ ಕಾಲ ಅದೇ ರೀತಿ ಮುಂದ್‌ವರ್ತ್‌ಲೆ. ಕೈಲಿ ಬೆಡಿ ಹಿಡ್ದ್ ಕಾಡ್ ಪ್ರಾಣಿಗಳ ಹೆಜ್ಜೆ ಹಿಡ್ದ್ ಸಾಗ್‌ತಿದ್ದವ್ಕೆ ಯಾಕೋ ಬೆಡಿ ಭಾರಾಂತ ಕಂಡತ್. ಪ್ರಾಣಿಗಳ ಬೇಟೆ ಮಾಡ್ದೊರ್‌ಂದಲೂ ಹೆಚ್ಚಾಗಿ ಅವರ ಹವ್ಯಾಸ ವೀಕ್ಷಿಸುವುದೇ ಲಾಯ್ಕ್‌ಂತ ಕಂಡಮೇಲೆ ಬೆಡಿನ ಮನೆಲೇ ಬುಟ್ಟ್ ಕಾಡ್ ಸುತ್ತಿಕೆ ಸುರುಮಾಡ್ದೊ. ಈ ಗೀಳ್ ಹೆಚ್ಚಾದಂಗೆ ನಿಧಾನವಾಗಿ ಅವ್ರೊಬ್ಬ ಪ್ರಕೃತಿನ ಆರಾಧಕ ಆಗಿ ಪರಿವರ್ತನೆ ಹೊಂದಿದೊ. ಮತ್ತೆನ ದಿನಲಿ ಅವರ ಕಡೇ ಉಸ್‌ರ್‌ನವರೆಗೆ ಪ್ರಕೃತಿನನೇ ಅನುಭವಿಸಿಕಂಡ್, ಕಾಡ್ ಪ್ರಾಣಿಗಳ ಉಳಿವ್‌ಗಾಗಿ ಅವರೆಲ್ಲಾ ಅನುಭವಗಳ ಧಾರೆ ಎರ್ದ್ ಜೀವನ ನಡ್ಸಿದೊ. ಕಾಡ್ ಪ್ರಾಣಿಗಳ ಜೀವನ ಶೈಲಿನ ತುಂಬಾ ನಿಗೂಢ ಕುತೂಹಲಗ ಅವರಂದಾಗಿನೇ ಹೊರ ಜಗತ್ತಿಗೆ ಗೊತ್ತಾವಂಗೆ ಆತ್. ಅದಲ್ಲೂ ಹುಲಿಗಳ ಜೀವನದ ಬಗ್ಗೆನ ಅನುಭವ ಅಪೂರ್ವದ್ದಾಗಿತ್ತ್. ಬಟ್ಟ್‌ಲಿ ಹೇಳ್ದಾದರೆ ಕಾಡ್‌ನ ಬಗ್ಗೆ, ಕಾಡ್ ಪ್ರಾಣಿಗಳ ಬಗ್ಗೆ ಅವ್ಕೆ ಇದ್ದ ಜ್ಞಾನ ಅವರ ಒಬ್ಬ ಪ್ರಕೃತಿನ ಮಹಾ ಸಂಶೋಧಕ ಆಗಿ ಮಾಡಿತ್ತ್.

ಇನ್ನೊಬ್ಬ ಮಹಾನ್ ವ್ಯಕ್ತಿ ಶ್ರೀ ಜಿಮ್ ಕಾರ್ಬೆಟ್‌ರನೂ ನನ್ನ ಬರವಣಿಗೆಲಿ ಪ್ರಸ್ತಾಪಿಸಿಯೊಳೆ. ಜೇಮ್ಸ್ ಎಡ್ವರ್ಡ್ ಕಾರ್ಬೆಟ್ ಅವರ ಪೂರ ಹೆಸರ್. 1875ನೇ ಇಸ್ವಿಲಿ ಜುಲೈ 25 ರಂದ್ ನೈನಿತಾಲ್ ಹುಟ್ಟಿದ ಇವ್ರೊಬ್ಬ ಬ್ರಿಟಿಷ್ ಭಾರತೀಯ. ಅಪ್ಪ ಕ್ರಿಸ್ಟಫರ್ ವಿಲಿಯಂ ಕಾರ್ಬೆಟ್, ಅಮ್ಮ ಮೇರಿ ಜೇನ್ ಕಾರ್ಬೆಟ್, ಬ್ರಿಟಿಷ್ ಆರ್ಮಿಲಿ ಕೆಲ್ಸಲಿದ್ದ ಜಿಮ್ ಕಾರ್ಬೆಟ್ ಪ್ರಪಂಚ ಕಂಡ ಅದ್ಭುತ ಬೇಟೆಗಾರ. ಭಾರತ ದೇಶ ಈ ವ್ಯಕ್ತಿನ ಹಲವಾರ್ ಕೋನಂದ ಕಂಡುಟು. ಹವ್ಯಾಸಕ್ಕಾಗಿ ರೈಫಲ್ ತೆಕಂಡ ಆ ವ್ಯಕ್ತಿ ಜೀವಂತ ಇರಿಕಾಕನೇ ಜನಗಳ್‌ಂದ ದೈವಾಂಶ ಸಂಭೂತ ವ್ಯಕ್ತಿಂತ ಆರಾಧಿಸಲ್ಪಟ್ಟಿದ್ದೊ. ಅವರ ಬೇಟೆಗಳ ಬಗ್ಗೆ ಹೇಳ್ರೆ ಆಶ್ಚರ್ಯಂತ ಕಂಡದೆ. ಅದ್ ಊಹೆಗೂ ಸಿಗದಂತದ್ದ್.

ಉತ್ತರಾಖಂಡ್‌ನ ಕಾಮೂನಂತ ಹೇಳುವ ಜಾಗೆನ ಭಯಕಂರ ಹುಲಿನೊಂದರ ಅವು ಬೇಟೆ ಮಾಡಿಕನ ಅಲ್ಲಿನ ಸುತ್ತ್‌ಮುತ್ತ್‌ನ ಜನ ಇವರ ದೈವನೇ ಕಳ್ಸಿದ

ಸಾಧುಂತ ಇವರ ಪೂಜೆ ಮಾಡ್ತಿದ್ದೊಂತ ಹೇಳ್ರೆ ಅವ್ವೆಷ್ಟ್ ದೊಡ್ಡವ್ರೂಂತ ನಾವ್ಗೆ ಗೊತ್ತಾದೆ. ಸಾವಿರಾರ್ ಮನುಷ್ಯರ (ದಾಖಲೆಯಲ್ಲಿದೆ) ಕೊಂದ ಹುಲಿ ಚಿರತೆಗಳ ಅವು ಬೇಟೆಯಾಡಿಯೊಳೊ. ಅದರ್ಲಿ ಚಂಪಾವತ್‌ನ ಹುಲಿ, ನರಭಕ್ಷಕ ಕಾಮೂನ್ ಹುಲಿ, ರುಧ್ರಪ್ರಯಾಗದ ಭಯಾನಕ ಚಿರತೆ ಅವರ ಬೇಟೆಗೆ ಬಲಿಯಾಕನ, ಜನಂಗ ಅವರ ದೇವಮಾನವ ಆಗಿ ಕಾಂಬಾಂಗೆ ಮಾಡಿತ್. ಒಬ್ಬ ಒಳ್ಳೇ ಫೋಟೋಗ್ರಾಪರ್ ಹಾಂಗೂ ಸಮರ್ಥ ಲೇಖಕ ಆಗಿದ್ದ ಜಿಮ್ ಅವರ "Eaters of comon", "Man eating Leopard of Rudhraprayaga", "Temple Tiger:, "Jungle hoze" ಮುಂತಾದ ಪುಸ್ತಕಲಿ ತಾವು ಎಷ್ಟ್ ದೊಡ್ಡ ಬೇಟೆಗಾರಾಂತ ಸಾಬೀತ್ ಪಡ್ಸಿಯೊಳೊ. ಒಟ್ಟ್‌ಲಿ ಬೇಟೆಲೇ ಜೀವನ ಕಂಡ್‌ಕಂಡ್ ಪ್ರಸಿದ್ಧಿನ ಕೊಡೀಲಿ ಇದ್ದ ಈ ವ್ಯಕ್ತಿ ನಿಧಾನ ನಿಜಸ್ಥಿತಿಗಳ ಬಗ್ಗೆ ಯೋಚಿಸತೊಡಗಿದೊ. ಆಗ ಅವ್ಕೆ ಸುರೂಗೆ ಕಂಡ ಸತ್ಯ ಈ ಭಾರತಕ್ಕೆ ಅರಣ್ಯ ರಕ್ಷಣೆನ ಅಗತ್ಯ ಉಟ್ಟೂಂತ. ಅದರ ಸುರೂಗೆ ಪ್ರತಿಪಾದಿಸಿದವು ಅವೇ. ಅವರ ಈ ಪ್ರಕೃತಿಪರ ಧೋರಣೆನ ಭಾರತ ಸರ್ಕಾರ ಬೆಂಬಲಿಸಿತ್. ಮಾತ್ರ ಅಲ್ಲ ಅವರ ಮೇಲುಸ್ತುವಾರಿಲೇ ರಿಸರ್ವ್ ಫೋರೆಸ್ಟ್‌ನ ರೂಪುರೇಷೆಗಳ ಸಿದ್ದಪಡಿಸಿತ್. ಅದರ್‌ಂದಾಗಿನೇ ಇಂದ್‌ನ ಭಾರತದ ಅತೀದೊಡ್ಡ ನ್ಯಾಶನಲ್ ಪಾರ್ಕ್ 1957 ನೇ ಇಸ್ವಿಲಿ ಪ್ರಾರಂಭ ಆತ್. ಅದಾದಮೇಲೆ ಆ ಪಾರ್ಕ್‌ಗೆ "ಜಿಮ್ ಕಾರ್ಬೆಟ್ ನ್ಯಾಶನಲ್ ಪಾರ್ಕ್"ಂತಳೇ ಹೆಸರ್ ಹಿಸಿದೊ. ಅಂತ ಮಹಾನ್ ಬೇಟೆಗಾರ ವ್ಯಕ್ತಿ ಅವರ ಬಾಳ್‌ನ ಉತ್ತರಾರ್ಧಲಿ ಭಾರತದ ಅರಣ್ಯ ರಕ್ಷಣೆನ ಹರಿಕಾರ ಆಗಿ ಈ ದೇಶದ ಜನಮನಲಿ ಇಂದ್‌ಗೆನೂ ಅಮರ. 1955 ಇಸವಿ ಏಪ್ರಿಲ್ 19 ರ ದಿನ ಕೆನ್ಯಾದ ನೈಯೀಂತ ಹೇಳುವ ಜಾಗೆಲಿ ಮರಣಿಸಿಕಾಕನ ಅವರ ಬಗ್ಗೆ ಭಾರತನೂ ಕಣ್ಣೀರ್ ಹರ್ಸಿತ್ತ್.

ನನ್ನೀ ಪುಸ್ತಕಲಿ ಬಂದ್‌ಹೋವ ಮತ್ತೊಂದ್ ಹೆಸರ್ ಬಾಬಣ್ಣ. ಅವು ನನ್ನ ಅಪ್ಪ. ಅವರ ಅಡ್ಡ್ ಹೆಸರ್ ಬಾಬಣ್ಣ. ನಿಜವಾದ ಹೆಸರ್ ರವೀಂದ್ರನಾಥ ಕುಡೆಕಲ್ಲು. ಅವರ ಬಗ್ಗೆ ಬರ್ಯಕನ ಆ ಪಾತ್ರಕ್ಕೆ ಹೆಚ್ಚ್‌ನ ಮಹತ್ವ ನೀಡ್ತ್‌ಲೆನೋಂತ ಬರ್ದ್ ಮುಗ್ಸಿದ ಮೇಲೆ ಕಾಂಬಕೆ ಸುರು ಆತ್. ಯಾಕೇಂತ ಹೇಳ್ರೆ ನನ್ನ ಕಣ್ಣೆದುರೇ ಕಂಡ ಒಬ್ಬ ಅಪ್ರತಿಮ ಬೇಟೆಗಾರ ಅವುನೂ ಆಗಿದ್ದೊ. ಎಲ್ಲಿಯಾರ್ ಯಾವುದೇ ಬೇಟೆಗಾರ ಹಿಸಿದ ಗುರಿ ತಪ್ಪಿರಿಕೆನೂ ಸಾಕ್. ಆದರೆ ನಾ ಕಂಡಾಂಗೆ, ಕೇಳ್ದಾಂಗೆ ಹಿಸಿದ ಗುರಿ ತಪ್ಪದೇ ಸಾದ್‌ಸಿದವು ಅವು. ನನ್ನ ನೆನ್ಪ್‌ನ ಪ್ರಾರಂಭದ ದಿನಂಗ

ಅದ್ ಆಗಿರೊಕು. ನನ್ನ ಅಜ್ಜ ರಾಮಯ್ಯನವರ ಕುರಿ ಹೇಳಿಕೇ ಬೊತ್ತದಷ್ಟ್ ಇತ್ತ್. ಕಾರಣ ಇಷ್ಟೇ. ನನ್ನ ಅಪ್ಪ ಹುಲಿ ಬೇಟೆ ಮಾಡಿದ್ದೊ. ಹುಲಿನ ಚಿತ್ರನನೂ ಕಾಣದ ಸಣ್ಣ ಪ್ರಾಯಲಿ ಸತ್ತ ಹುಲಿನ ಕಂಡಿದ್ದೆ. ಸತ್ತಿದ್ದ ಹುಲಿನ ಎದ್ದ್ ನಿತ್ತಾಂಗೆ ಅಡ್ಕೆ ಸಲಿಕೆಲಿ ಕಟ್ಟಿ ನಿಲ್ಸಿದ್ದೊ. ಅದರ ಮುಟ್ಟಿ ಖುಷಿ ಪಟ್ಟಿದ್ದೆ. ಇಂದ್ ಅದರ ನೆನ್ಸಿಕನ ಅದೊಂದ್ ಬ್ರಮೆನೋಂತ ಅನ್ಸಿದೆ. ಆದರೂ ಸತ್ಯ ಸತ್ಯನೇ... ನನ್ನಪ್ಪನ ಬೇಟೆನ ಪುಸ್ತಕಲಿ ಬರ್ದರೆನೂ ಅದ್ ಪರಿಪೂರ್ಣಾಂತ ನಂಗೆ ಅನ್ಸುದುಲೆ. ಅವರ ತುಂಬಾ ಬೇಟೆಗಳ ಬಗ್ಗೆ ಅವರ ಹಕ್ಕಲೆ ಹೆಚ್ಚ್‌ಯಾಗೊಳೂ ಕೇಳ್ತ್‌ಲೆ; ಅವು ಹೇಳ್ತೊ ಇಲ್ಲೆ. ಆದರೆ ಕಣ್ಣಾರೆ ಕಂಡೊಳೆ ಅವೆಂತಾ ಈಡ್‌ನವೂಂತ. ಅವರ್ದ್ ಒಂದ್ ಈಡ್‌ನೂ ತಪ್ಪಿರಿಕಿಲೆ. ಎಲ್ಲಿನೋ ಒಂದ್ ಬೇನೆ ಅವರ ಬಗ್ಗೆ ಹೆಚ್ಚ್ ಬರ್ತ್‌ಲೇಂತ ಈಗಲೂ ಉಟ್ಟು. ಯಾಕೆನೋ ಗೊತ್ತಿಲೆ; ಅವರ ಬೇಟೆಗಾರ ಆಗಿ ನಾ ಕಂಡತ್ಲೆ ಏನೋ...? ನನ್ನ ಊರ್‌ನ ಸುತ್ತ್ ಹತ್ತ್ ಊರ್ಲಿನೂ ಒಬ್ಬ ಸರಳ ಸಜ್ಜನ ಸಾಧು ಆ ವ್ಯಕ್ತಿ. ಅದೊಂದ್ ಕಾರಣಂದಲೇ ಅವರ ಅದ್ಭುತ ಚಾಕಚಕ್ಯತೆನ ನಾ ಅನುಭವಿಸಿತ್ಲೆನೋ ಏನೋ...? ಅಥವಾ ಅವರಪ್ಪ ರಾಮಯ್ಯ, ಚಿಕ್ಕಪ್ಪ ಅಪ್ಪಯ್ಯನೆರ್ದ್‌ಲಿ ಸೊಲ್ಪ ಮಂಕಾದಾಂಗೆ ಕಂಡೊ ಏನೋ... ಆದರೂ ನಂಗೆ ಹಾಂಗೆ ಅನ್ಸ್‌ದುಲೆ. ಯಾತ್ರೆ ಒಂದರ್ಲಿ ಕಾಶಿಗೆ ಹೋದವು ಅಲ್ಲಿ ಎಂತದಾದರೂ ತ್ಯಜಿಸುಕೂಂತ ಆಕನ ಅವರ ಪ್ರೀತಿನ ಹವ್ಯಾಸನೇ ಬುಟ್ಟೊ. ಒಟ್ಟ್‌ಲಿ ಸರಳ, ಸಜ್ಜನ, ಸಂಭಾವಿತರ ಚೌಕಟ್ಟ್‌ಲಿ ಯಾರಾರ್ ದಾಖಲೆ ಮಾಡಿರೆ ಅದರ್ಲಿ ನನ್ನಪ್ಪ ಇರ್ವೋ. ಅದ್ ನಂಗೆ ಹೆಮ್ಮೆ.

* * * * *



ಕೆ. ಆರ್. ತೇಜಕುಮಾರ್ ಬಡ್ಡಡ್ಕ

## ಗುರ್ತ್‌ನೊಟ್ಟಿಗೆ ಹಿನ್ನುಡಿ

ಸುಳ್ಯದ ಬೋರ್ಡ್ ಹೈಸ್ಕೂಲ್‌ಲಿ 8ನೇ ಕ್ಲಾಸ್ ಓದಿಕಾನನೇ (1971) ಸೊಂಟಲಿ ಪಿಸ್ತೂಲ್ ಇಸಿಕಂಡ್ ಬರ್ತಿದ್ದ ನನ್ನ ಕ್ಲಾಸ್‌ಮೇಟ್ ಆಗಿದ್ದವನೇ ತೇಜ. ಐದ್ ಡಿವಿಜನ್ ಇದ್ದ ಎಂಟ್ನೆ ಕ್ಲಾಸ್‌ನ ಮಕ್ಕಳ ಪೈಕಿ ರಫ್ & ಟಫ್ ತೇಜ ಗ್ರೌಂಡ್‌ಗೆ ಬಂದರೆ ನಾವೆಲ್ಲಾ ಬ್ಯಾಟ್ ಚೆಂಡ್‌ನ ಬುಟ್ಟ್ ದೂರ ನಿಲ್ತಿದ್ದೊ. ಆ ಕಾಲಲಿ ತೇಜಂಗೆ ಪಿಸ್ತೂಲ್‌ಗೂ ಆಟದ ಚೆಂಡ್‌ಗೂ ವ್ಯತ್ಯಾಸನೇ ಗೊತ್ತಿಲ್ಲೆ. ಕ್ಲಾಸ್‌ನ ಹೊತ್ತ್‌ಲೇ ಮಕ್ಕಳ ಕರ್ಕಂಡ್ ಕಾಂತಮಂಗಲ ಹಳ್ಳದಕರೆಗೆ ಹೋಗಿ ಅವನ ಪಿಸ್ತೂಲ್‌ನ ಡೆಮೋ ಕೊಡ್ತಿತ್ತ್. ಸುಳ್ಯ ಜಾತ್ರೆಲಿ ಸಿಕ್ಕ್‌ತಿದ್ದ ಆಟದ ಪಿಸ್ತೂಲ್‌ಗೆ ಕೊಡೆಕಾಲ್‌ನ ಕುದ್ರ್‌ಸಿ ಪಿಸ್ತೂಲ್ ಸ್ವತ: ತಯಾರ್‌ಮಾಡಿ ಸೊಂಟಲಿ ಸಿಕ್ಕ್‌ಸಿಕಂಡ್ ಬರ್ತಿದ್ದ ಅದೇ ತೇಜ ಇಂದ್‌ನ ತೇಜಕುಮಾರ್ ಬಡ್ಡಡ್ಕ.

ಬೆಡಿ ಮತ್ತೆ ಬೇಟೆ ಬಡ್ಡಡ್ಕದವ್ಕೆ ಪಂಡ್‌ಂದಲೇ ಅಂಟಿದ ಮೋರ್ಲ್. ಇವನ ಸಣ್ಣಜ್ಜ (ಅಜ್ಜನ ತಮ್ಮ) ಬಡ್ಡಡ್ಕ ಅಪ್ಪಯ್ಯಗೌಡ ನೂರೊಂದ್ ಹುಲಿ ಹೊಡ್ದವ್ರುಂತ ಸುತ್ತ್ ಹತ್ತೂರ್ಲಿ ಹೆಸರ್ ತೆಕಂಡವು. ತೇಜನೂ ಬಾರೀ ಈಡ್‌ಗಾರ ಆಗಿತ್ತ್‌ಂತ ಗೊತ್ತುಟು. ಕಾಲ ಒಂದೇ ರೀತಿ ಇರ್ದುಲೆ. ಅನುಭವ ಸತ್ಯನನೇ ಹೇಳ್ದೆ. ಇದ್ ಅವನ ಅನುಭವದ ಕೃತಿ. ಆಫ್ರಿಕಾ ದೇಶಲಿ ಒಂದ್ ಮಾತುಟ್ಟು. “ಇದುವರೆಗೆ ಸಿಂಹನ ಬೇಟೆನ ಚರಿತ್ರೆ ಬೇಟೆಗಾರನೇ ಬರಿತಿತ್ತ್; ಆದರೆ ಇನ್ನ್ ಮುಂದೆ ಸಿಂಹಗಳೇ ಬರ್ದವೇಂತ”. ಇದೊಂದ್ ಕ್ರಾಂತಿಕಾರಿ ಮಾತ್. ಹಾಂಗೆ ಬೆಡಿ ಹಿಡ್ದ್ ಗೊತ್ತಿಲ್ಲದವು ಬೇಟೆನ ಬಗ್ಗೆ ಬರ್ಯತಿದ್ದೊ. ಈಗ ಸ್ವತ: ಬೇಟೆನ ಅನುಭವ ಇದ್ದವನೇ ಬರ್ಯಕೆ ಪ್ರಾರಂಬಿಸಿಟು. ಬರವಣಿಗೆ ತೇಜಂಗೆ ಹೊಸ್ತೇನೂ ಅಲ್ಲ. ಒಂದೆರಡ್ ಕಾದಂಬರಿ, ಒಂದ್ ಕಥಾ ಸಂಕಲನ, ಹತ್ತಾರ್ ಕತೆಗ, ಕವನಗ, ಬರ್ದ ತೇಜಂದ ಇದ್ ಸುರೂನ ಅರೆಬಾಸೆ ಪುಸ್ತಕ. ಅವನ ಸುರೂನ ಕನ್ನಡ ಪುಸ್ತಕ ‘ಹಿರಣ್ಯಗರ್ಭ’ ಅವಂಗೆ ಪ್ರಶಸ್ತಿ ತಂದ್ ಕೊಟ್ಟಿತ್ತ್.

ಸದ್ರಿ ತೇಜ ಕೃಷಿಕ. ಸುಳ್ಯದ ಕಾಂಗ್ರೆಸ್ ರಾಜಕಾರಣಿಯಾಗಿ ಕೆಲವಾರ್ ಜವಾಬ್ದಾರಿಗಳ ನಿಭಾಯಿಸಿದವ ಆಗಿದ್ದರೂ ಸಾಹಿತ್ಯ ಕ್ಷೇತ್ರಕ್ಕೆ ಅವನ ಕೊಡುಗೆ ಕಡಿಮೆಯೇನಲ್ಲ. ಹಲವಾರ್ ದೇಶಗಳ ಸುತ್ತಿ, ವಿಭಿನ್ನ ಅಭಿರುಚಿಗಳ ಅನುಭವಗ ಅವನೊಟ್ಟಿಗೆ ಉಟ್ಟು. ಸ್ವತ ವನ್ಯಪ್ರೇಮಿ ಆಗಿ ಸಸ್ಯಪ್ರಭೇದಗಳ ಬಗ್ಗೆ ಅದರ್ಲೂ ಮೊದ್ದ್‌ನ ದೈಯಿಗಳ ಬಗ್ಗೆ ಬಾರೀ ಮಾಹಿತಿ ಇದ್ದವ. ಕಾಡ್‌ನೊಳಗೆ ಮೃಗ ಅಲ್ಲದೆ ಮತ್ತೇನುಟ್ಟೂಂತ ಕೇಳಿರೆ ಬಾರೀ ವಿಚಾರಗಳ ತೋರ್ಸಿ ಕೊಟ್ಟದೆ. ಕಣ್ಣ್‌ಲಿ ಬರೀ ನೋಡ್ದಕ್ಕಿಂತ ಹೆಚ್ಚಿ ನೋಡ್ದರ ಬಗ್ಗೆ ಆಳವಾಗಿ ಯೋಚನೆ ಮಾಡುವ ಚಾಳಿ ಇರುವ ತೇಜನ ಈ ಕೃತಿ ಮೇಲ್ನೋಟಕ್ಕೆ ಬೇಟೆದರಾಂಗೆ ಕಂಡರೂ ಅದ್ ನಿಜ ಅಲ್ಲ. ಈ ‘ಕಾಡ್‌ನ ಮಕ್ಕ’ ಕೃತಿನೊಳಗೆ ಪ್ರಕೃತಿನ ಅಪ್ಪಿ ಒಪ್ಪಿಕಂಡಂತಾ ಒಂದ್ ಸಂವೇದನಾಶೀಲ ಮನಸ್ಸುಟ್ಟು. ಪ್ರಕೃತಿನನೇ ದೇವ್‌ರ್‌ಂತ ಹೇಳುವ ಸತ್ಯದ ನೆಲೆಉಟ್ಟು. ಅದ್ ತೇಜ ಕಂಡ ಸತ್ಯ.

– ಹಿಮಕರ ಎ.ಕೆ.